

## ಕವಿ ಹೇಮಂತರು

ಹೇಮಂತರು ಈಗ ಹೈದರಾಬಾದಿನ ನಿಜಾಮು ಕಾಲೇಜಿನಲ್ಲಿ ಆಂಗ್ಲ ಭಾಷೆಯ ಪ್ರಾಧ್ಯಾಪಕರಾಗಿದ್ದಾರೆ. 'ಸ್ನೇಹಸೂಕ್ತ' ಅವರ ಪ್ರಥಮ ಕವನ ಸಂಕಲನ! ಅನೇಕ ವರ್ಷಗಳಿಂದ ಬರೆದು ಹಾಗೆಯೇ ಇಟ್ಟು ಬಿಟ್ಟ ನೂರಾರು ಕವನಗಳಿಂದ ಕೆಲವನ್ನು ಆಯ್ದು ಇಲ್ಲಿ ಕೊಡಲಾಗಿದೆ.

ಇದಕ್ಕೂ ಮೊದಲು ಮನೋಹರ ಗ್ರಂಥ ಮಾಲೆಯು ಅವರ 'ಭಗ್ನ ಮಂದಿರ'ವನ್ನು ಪ್ರಕಟಗೊಳಿಸಿ ಅವರ ಸಾಹಿತ್ಯ ಶಕ್ತಿಯ ನಿದರ್ಶನವನ್ನು ಕನ್ನಡಿಗರಿಗೆ ಚೆನ್ನಾಗಿ ಮಾಡಿಕೊಟ್ಟಿದೆ. ಅಲ್ಲಿ ಹೇಮಂತರ ಮೂಲ ಪ್ರಕೃತಿ ಕವಿ ಪ್ರಕೃತಿಯಾಗಿದೆ ಯೆಂಬುದು ಸ್ಪಷ್ಟವಾಗಿದೆ. ಕಲ್ಪನೆಯ ಸೌಂದರ್ಯದೊಡನೆ ಭಾವನೆಯ ಮಾಧುರ್ಯ ಬೆರೆತುಕೊಂಡು ನುಡಿಯ ನಯವಾದ ನೇಗೆ ಯಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿವೆ. ಅವರ ಈ ಕವನ ಸಂಗ್ರಹಕ್ಕೆ ಕನ್ನಡಿಗರು ಸುಸ್ವಾಗತವನ್ನು ಬಯಸುವರೆಂದು ನಾವು ಆಶಿಸುತ್ತೇವೆ.



# ಸ್ನೇಹ-ಸೂಕ್ತ

ಹೇಮಂತ



ಪ್ರಕಾಶಕರು:

**ಸಾಹಿತ್ಯ ನಿಕೇತನ, ಹೈದರಾಬಾದು**

# ಕವಿತಾ ಸೂಚಿ

# ಮುನ್ನುಡಿ

ಜೀವನವು ವಿಕೃತವಾದಾಗ ಜೀವ ಮರಣಕ್ಕೇ ಶರಣಾಗುವದು; ಇದು ನಮ್ಮ ಇಂದಿನ ಜೀವಿತದ ರೌದ್ರ ಭಯಾನಕ ಚಿತ್ರ; ಇದರಿಂದ ಶೋಕಾಕುಲಿತವಾದ ವಾಣಿ ಜಿಗುಪ್ಸಿತದಿಂದ ರಂಜಿತವಾಗುತ್ತದೆ; ನಿಶಾಚರ ಜೀವನಕ್ಕೆ ಭೂತ ಜಾತಿಗಳು ಆಕರ್ಷಿತವಾಗುತ್ತವೆ. ಇಂಥ ಸಾಹಿತ್ಯದಲ್ಲಿ ಗೌಣ ವಸ್ತುಗಳಿಗೆ ಪ್ರಾಧಾನ್ಯ ಬರುತ್ತದೆ. ರಾಜತತ್ತ್ವ ಮಾಯವಾಗುತ್ತದೆ. ಮತ ವೈಚಿತ್ರ್ಯದ ಮಾಯಾವಿಕತೆಯು ತನ್ನ ಗೊಡ್ಡಾಟಗಳಿಗೆ ಬಣ್ಣಕೊಟ್ಟು ಕಾಲಹರಣ ಮಾಡುತ್ತದೆ. ಆಗ, 'ಜೀವನದಲ್ಲಿ ಸುಕೃತದ ದರ್ಶನವಾಗುವದೆಂದು?' ಎಂಬ ಪ್ರಶ್ನೆಯನ್ನು ಯಕ್ಷ ಕೇಳುತ್ತದೆ.

ಎಲ್ಲ ಪ್ರಕೃತಿಯಲ್ಲಿಯೂ ಆದರದರ ಪೌರುಷವು ಅಡಕವಾಗಿರುತ್ತದೆ. ಆ ಸ್ವಯಂಭು ಸೌಂದರ್ಯವನ್ನು ಕಾಣುವ ಕಣ್ಣು ಆದರ ಹೃದಯದಲ್ಲಿ ಉನ್ಮೀಲಿತವಾದಾಗ ಜೀವವು ಕವಿ ಪದವಿಯನ್ನು ಪಡೆದು, ಅದರ ಪ್ರಭಾವದಿಂದ ಜೀವನದ ವಿವಿಧ ವೈಭವವನ್ನು ಪ್ರಕಾಶಗೊಳಿಸುತ್ತದೆ. ಆದರೆ ಅದನ್ನು ನೋಡಿ, ದೈವಿಕ ವಿಭೂತಿಯಿಂದ ವಿಸ್ಮಿತರಾಗಿ ಬರಿ ಸ್ತಂಭಿತರಾಗದೆ ಆ ಅದ್ಭುತವು ಸೃಷ್ಟಿಯಲ್ಲಿ ಇಳಿದು ಬರುವಂತೆ ಮಾಡೇವು ಎನ್ನುವ ವೀರ ಭಕ್ತರ ಪ್ರಚಂಡ ಉತ್ಸಾಹವು ಆವಿರ್ಭೂತವಾಗಿ ಸೌಂದರ್ಯ ಪ್ರದರ್ಶನವನ್ನೂ ಇದಿರುಗೊಂಡು ಬರಮಾಡಿಕೊಳ್ಳದಿದ್ದರೆ ಮತ್ತೆ ಜೀವನವು ಹುಸಿಯಾಗಿ, ಅದೊಂದು ಕಲಾರತಿಯ ಪ್ರಹಸನದ ಪ್ರಕಾರವಾಗಿ, ಬರಬರುತ್ತ ಅಪಹಾಸ್ಯಕ್ಕೂ ಉಪಹಾಸ್ಯಕ್ಕೂ ಅದು ಈಡಾಗುವದು. ಹೀಗಾಗಿ ವಾಸ್ತವಿಕತೆಯ ಬೀಭತ್ಸವು ಆದರ್ಶವಾದವನ್ನು ನಾಸ್ತಿಕ ಪ್ರಾಯವಾಗಿ ಕಾಣುವದು. ಖೊಟ್ಟಿ ನಾಣ್ಯವನ್ನು ಯಾವ ಮುಗ್ಗುಲಿಂದ ಬಾರಿಸಿ ನೋಡಿದರೂ ಏನು? ಅದರ ನಾದದಲ್ಲಿ ಸತ್ಯದ ಧ್ವನಿಯಿರುವದಿಲ್ಲ. ಜೀವನದ ನೀರಡಿಕೆ ಆರುವದು ಸಾತ್ವಿಕವಾದ ಶುದ್ಧ ನೀರಿನಿಂದ. ನೀರಾದ ಅಮಲು ಅದನ್ನು ಪರಿಹರಿಸದು. ಇಂದಿನ ರಾಜ ಪ್ರಜಾಶಕ್ತಿಗಳಲ್ಲಿ ಪ್ರಚಂಡವಾದ ಹಸಿವಿದೆ.

ಅದನ್ನು ನೀಗಿಸಿಕೊಳ್ಳುವ ಕಸುವಿಲ್ಲ. ಇದ್ದರೂ ಅದರಲ್ಲಿ ಕಸುಕಿದೆ, ಪಕ್ವ ಮಾಧುರ್ಯವಿಲ್ಲ. 'ಹೇಮಂತ'ರ ಕವಿದೃಷ್ಟಿಯು ಪ್ರಕೃತ್ಯಂತರ್ಗತ ಮಹಾ ಮಾತೆಯ 'ಸ್ನೇಹ'ದಲ್ಲಿ ಆ ಮಾಧುರ್ಯದ ಬೀಜವನ್ನು ಕಂಡು, ಕಾವ್ಯ ಸೂಕ್ತಗಳಿಂದ ಅದಕ್ಕೆ ಸ್ವಾಗತ ಬಯಸಿದೆ.

ಶ್ರೀ 'ಹೇಮಂತ'ರ 'ಸ್ನೇಹಸೂಕ್ತ'ವು ಅವರ ಪ್ರಥಮ ಕವನ ಸಂಗ್ರಹವಾದರೂ ಪ್ರೌಢವಾಗಿದೆ. ಅದರ ಬಾಲ್ಯದ ತಪ್ಪಡಿಗಳ ಚಂದವೂ ಅಲ್ಲಲ್ಲಿ ತಲೆದೋರಿದೆ. ಆದರೆ ಕನ್ನಡದ ನವೀನ ಕವಿಗಳ ಸಾಲಿನಲ್ಲಿ ಹೇಮಂತರ ಕವಿಧ್ವನಿಯು ತಮ್ಮದೇ ಆದ ವಿಲಾಸದಿಂದ ವ್ಯಿದೋರಿದೆ. ಅವರ 'ಭಗ್ನಮಂದಿರ' ಕಾದಂಬರಿಯು ಅನೇಕರ ಮೆಚ್ಚಿಗೆಯನ್ನು ಪಡೆದಿದೆ. ಈ ಪ್ರಕಟಣೆಯಿಂದ ಅವರು ಕನ್ನಡ ಜನಕ್ಕೆ ಹೆಚ್ಚು ಹತ್ತಿರದವರಾಗುವರೆಂದು ನಂಬಿದ್ದೇನೆ.

ಬೆಳಗಾಂವ ನಾಡಿನಲ್ಲಿ ಬಾಲ್ಯ ಕಳೆದು ಪೂನಾ ನಾಡಿನಲ್ಲಿ ವಿದ್ಯೆ ಕಲಿತು ಕಲಿಸಿ, ಧಾರವಾಡದವರೊಡನೆ ಸ್ನೇಹ ಬೆಳೆಸಿ, ವಿಜಾಪುರದಲ್ಲಿ ಪ್ರಭಾವ ಪಡೆದು ಈಗ ಭಾಗಾನಗರ (ಹೈದರಾಬಾದ) ದ ಕನ್ನಡ ನಾಡಿನಲ್ಲಿ ವಿದ್ಯಾ ಗುರುಗಳಾಗಿರುವ ಹೇಮಂತರು ಅಲ್ಲಿಯ ಸಾಹಿತಿಗಳ ಮೇಳದಲ್ಲಿ ಸ್ವರ ಗೂಡಿಸಿ ತಮ್ಮ ಸಂಚಾರದಿಂದಲೇ ಕನ್ನಡದ ಏಕೀಕರಣವನ್ನು ಸಾಧಿಸುತ್ತಿದ್ದಾರೆ. ಅಲ್ಲಿಯ 'ಬಾನುಲಿ'ಯಿಂದ ಇವರ ಗೀತವು ಅಖಿಲ ಕರ್ನಾಟಕದಲ್ಲಿ ನಿನಾದಿತವಾಗಿ 'ಸ್ನೇಹ' ಜಾಗೃತಿಯನ್ನು ಮಾಡಲೆಂದು ನಾನು ಆಶಿಸುತ್ತೇನೆ.

'ನಾ ವಿರಹಿತ ದೈವ ಹೀನ<br>ಶೋಕವಿದ್ಧ ವಿಕಲ ದೀನ'

ಎಂದು ಕಲ್ಪನೆಯ ಆಶ್ರಯವನ್ನು ಕೋರುವ ಈ ಕವಿಯು ಪ್ರಳಯ ಮೇಘಮಾಲೆಯ ಮಯೂರ ನೃತ್ಯದಲ್ಲಿ

'ಭವ್ಯಭೀಕರಾ ಬೃಹದಾಕಾರಾ<br>ರುದ್ರವಾದರೂ ಶುಭಶ್ರೀಕರಾ'

ಎಂದು ಒಂದು ಸೌಂದರ್ಯ ಕಾಣುತ್ತಾನೆ.

ಏನಿದ್ದರೂ 'ಈ ಲೋಕವು ಪುಣ್ಯತೀರ್ಥ-
ಹೃನ್ನದಿಗಳು ಬೆರೆಯಲು'

ಎಂಬುದನ್ನು ಮರೆಯುವದಿಲ್ಲ. ನದಿಗಳೇನೂ ನೀರಾವರಿ ಖಾತೆಯ ಕಾಲುವೆಗಳಲ್ಲ! ಅದರದರ ಅಂಕುಡೊಂಕು ರೀತಿ ಅವಕ್ಕೆ ಇದ್ದೇ ಇದೆ. ಅಂತೆಯೇ ಅವುಗಳ ಕೂಡಲವು ಪ್ರೀತಿ ತೀರ್ಥವಾಗುವದು. 'ಸಂಗಮ'ದಲ್ಲಿ ಅದರ ಮಧುರ ಸ್ವರ ಕೇಳಬರುವದು. 'ಸಂಧ್ಯಾಸೂಕ್ತ'ದಲ್ಲಿ — ಜೀವನವು ಕುರುಕ್ಷೇತ್ರವೂ ಅಹುದು, ಆದರೆ ಅದು ಧರ್ಮಕ್ಷೇತ್ರವೂ ಅಹುದು; ಕುರುಡರ ಜೀವನವು ಜೀವನ್ಮೃತ್ಯು; ಕಣ್ಣುಳ್ಳವರ ಬಲಿದಾನವು ಅಮರತೆಯ ಸ್ಮಾರಕ! 'ಬುದ್ಧ ಬೋಧಿಯು ಮತ್ತೆ ಚಿಗುರಿತು' ಎಂದು ಅವರಿಗೆ ಸಂಜೆಗೆಂಪಿನಲ್ಲಿ ಬೋಧವಾಗುತ್ತದೆ.—

ಆದರೇನು? ಬಹಿರಂಗಕ್ಕೂ ಅಂತರಂಗಕ್ಕೂ ಸಾಮರಸ್ಯ ಮಾಡುವ ರಂಗಭೂಮಿ ಇನ್ನೂ ತೆರೆಯ ಮರೆಗಿದೆ.

'ಮುಚ್ಚು ಮುಚ್ಚು ಬಾಗಿಲ
ತೆರೆದು ಹೃದಯ ಸ್ನೇಹಲ'

ಎಂದು ಕವಿಹೃದಯ ಚೀರುತ್ತದೆ, ಕೋರುತ್ತದೆ. ಅದರ ಮಧುರಾನುಭವದಿಂದ

'ಕಲೆತ ಜಗದ ಸಂಘಗೀತ-ದಿಕ್ತಟಾಕ ಚುಂಬಿತು
ಮರೆತ ಮನದ ನೂರು ಸುಖದ ಹಿಗ್ಗು ಹಾಡು ಹೊಮ್ಮಿತು'

ಎಂದು ಕವಿಗೆನಿಸುವದು.

'ಅಗ್ನಿಗಾಥ' ಓಜಸ್ವಿಯಾದ ಕವನ.

'ಸಾಯಬೇಕಾದುದನು ಸಾಯಿಸು
ಲೋಕದೊಳಿತೊಂದನ್ನೆ ಬೆಳೆಯಿಸು
ಬೆಳಗು ಬಾ ಬೆಳಕೆ!'

ಎಂಬ ಕೆಚ್ಚಿನ ನುಡಿ ಇಲ್ಲಿ ಹುಟ್ಟುವದು. ಆಮೇಲೆಯೂ ಹೊಸ ಕ್ಷಿತಿಜಗಳು ತೆರೆಯುತ್ತ ಹೋಗುತ್ತಲೆ ಇವೆ. 'ಬೆಳಕು ಬೆಳೆದ ಈ ಹಿತ'

ಎಂಬ ಭಾವಗೀತದಲ್ಲಿ ಒಳಹೊರ ಬೆಳುದಿಂಗಳು ಒಂದಾಗಿ ಅದೊಂದು ಪ್ರಣಯ ಗೀತದ ಮಾಧುರ್ಯ ಪಡೆದಿದೆ.

ದಿವಂಗತ ವಲ್ಲಭಭಾಯಿಯವರ ನಿರ್ಯಾಣ ಕುರಿತು ಬರೆದ 'ಕವನ ಕಂಬನಿ'ಯು ಶಕ್ತಿಯುತವಾಗಿರುವದಲ್ಲದೆ, ನಿರರ್ಗಳತೆಯಲ್ಲಿಯೂ 'ಹೇಮಂತ'ರು ಛಂದವನ್ನು ಮೂಡಿಸುವರೆಂಬುದಕ್ಕೆ ಅದು ಒಳ್ಳೆಯ ನಿದರ್ಶನವಾಗಿದೆ. 'ಸೋತವನ ಹಾಡಿ'ನಲ್ಲಿ ಮೃದು ಮಧುರವಾಗಿ ವಿಡಂಬನವು ಬೆರೆತುಕೊಂಡ ಭಾಸವಾಗಿ ಅದಕ್ಕೆ ಹೊಸದೊಂದು ರುಚಿಯುಂಟಾಗುವದು. 'ಸ್ನೇಹ ಸಿಂಧು' ಎಂಬ ಕವನದಲ್ಲಿ 'ಅಗ್ನಿ ಮೀಳೆ'ಯ ಕೆಚ್ಚು ನವೀನ ಕಾಂತಿಯನ್ನೂ ರಮಣೀಯತೆಯನ್ನೂ ಪಡೆದಿದೆ. ಪ್ರಣಯ ಗುರುವಿನ ಸಂನ್ನಿಧಿಯಿಂದ ಮತ್ತೊಂದು ನಂಬಿಗೆಯ ಊರ್ಮಿ ಕವಿಜೀವನದಲ್ಲಿ ಎದ್ದಿದೆ. 'ಸಂಜೆಗೆ' ಎಂಬ ಪ್ರಗಾಥ ಚಿಕ್ಕದಾಗಿ ಅದು ಔನ್ನತ್ಯ ಪಡೆದಿಲ್ಲ. 'ಎನಿತು ಕಾಲ'ದಲ್ಲಿ ಕವಿಹೃದಯದ ಮಿಡಿತ ಸಿಡಿತ ಸ್ಫುಟವಾಗುವದು. 'ರಾತ್ರಿಗೆ' 'ಸ್ವಪ್ನ ಹರಿಣ'ಗಳಲ್ಲಿ ಕವಿ ಕಲ್ಪನಾ ವಿಲಾಸವು ಚೆಲ್ಲವರಿದು ಈ ಸಂಗ್ರಹದೊಳಗಿನ 'ವಸುಂಧರಾ ಗೀತ'ದಲ್ಲಿ 'ಸ್ನೇಹ ಸೂಕ್ತ'ದೊಳಗಿನ ಎಲ್ಲ ಸೂತ್ರಗಳೂ ಈ ಒಂದೆ ಗೀತದಲ್ಲಿ ಪಟವಾಗಿ ನೆಯ್ಗೆ ಪಡೆದಿವೆ. ಇಂತು, ಈ ಸಂಗ್ರಹದ ಮೈಯೂ, ಅಂಚೂ, ಸೆರಗೂ ಎಲ್ಲವೂ ಒಂದೊಂದು ಚೆಲುವಿನಿಂದ ಮಿರಗುತ್ತಿದೆ.

ಕವಿಯ ಈ ಮೊದಲನೆಯ ತಾನವೆ ಒಂದು ತೃಪ್ತಿಯಿಂದ ತುಂಬಿಕೊಂಡು ಬಂದಿದೆ. ಇದರ ಶ್ರವಣದಿಂದ ನನಗಾದ ಸುಖವೇ ಉಳಿದ ರಸಿಕರ ಅನುಭವಕ್ಕೂ ಬರುವದೆಂದು ನಾನು ತಿಳಿದಿದ್ದೇನೆ. 'ಹೇಮಂತ'ರು ಶಕ್ತಿ-ಮಾಧುರ್ಯ ಸಮನ್ವಿತವಾದ ಉಕ್ತಿಗಳಿಂದ ನಾಡಿನ ಜನರ ನಾಡಿಯಲ್ಲಿ ಜೀವ ಪ್ರವಾಹವನ್ನು ತುಂಬುವಂತೆ ಮಾಡುವರಾಗಿ ನಾನು ಹಾರಯಿಸುತ್ತೇನೆ.

ಸೊಲ್ಲಾಪುರ
೩೧—೧—೫೨

ದ. ರಾ. ಬೇಂದ್ರೆ.

ಶ್ರೀಶಿವನುಂಗಿ ನುಂಗಿ ನಿಂತ ಮೌನವಿಂದು ಮುಖರಿತ

ದುಃಖದಷ್ಟು ಭಾವಗಳೂ  ನೋಡು ಸುಮನ ಪುಲಕಿತ

ಮನದ ಹಿಮವು ಕರಗುತಿಹುದು ಜೀವ ಜಮುನೆ ಲಹರಿತ

ಅಧರ ಅದುರೆ ಮಧುರ ಮದಿರೆ ನುಡಿನುಡಿಯಲಿ ಗಂಧಿತ

# ಸ್ನೇಹ-ಸೂಕ್ತ

ಏಳು ಮಾತೆ
ಜನ್ಮದಾತೆ
ಹೇ ಸ್ನೇಹದ ಮೂರುತಿ !
ಕೇಳಿ ಬಂದೆ
ತಾಯೆ, ನಿನ್ನ
ಮೊಲೆ ಹಾಲಿನ ಕೀರುತಿ !

(೨)

ತನ್ನ ರಕ್ತ ತಾನೆ ಹೀರಿ
ತನ್ನ ಮಾಂಸ ತಾನೆ ಸವರಿ
ನಿಂತಿರುವಳು ಪೃಥ್ವಿಗೌರಿ
—ಬರಿ ಎಲುಬಿನ ಹಂದರ !
ಚೀರುತಿಹುದು ಜೀವ ಹಲುಬಿ
—ನಾ ಕಂಬನಿ ಕಂದರ

(೩)

ಬುವಿಯೆದುರಿಗೆ ಬಾನಗುವರಿ
ನುಂಗಿ ತನ್ನ ಕಿರಣಲಹರಿ
ಮಂಗಲವನು ಮುರಿದ ಮಾರಿ
—ಅದೊ ಭೀಕರ ಶರ್ವರಿ !

ಕಣ್ಣಂಗಿರೆ ನಿಂತಿರುವಳು
ಯಮರಾಜನ ಸೋದರಿ !

(೪)

ಭೀತ ವಿಶ್ವಕೇಳುತಿಹುದು
ನಿನ್ನ ಸೆರಗಿನಾಸರೆ
ಎದೆ ಹಸಿದಿದೆ ಹರಿದು ಬರಲಿ
ಮೊಲೆ ಹಾಲಿನ ಸವಿದೊರೆ

ನಿನ್ನ ವಿನಾ ಜೀವವೆಲ್ಲಿ
ನಿನ್ನ ವಿನಾ ಭಾವವೆಲ್ಲಿ

ನೀ ಕಾಯುವ ಕಲ್ಪವಲ್ಲಿ
ನಂಜುಂಡನ ಕಂಗಳು
ಉರಿಯುತಿಹವು; ಬಾರೆ, ನೀನೆ
ಗೌರಿ ಗಂಗೆ ತಿಂಗಳು !

---

# ಕಲ್ಪನಾ ವಿಲಾಸ

ವಿಶ್ವಜನ್ಮ ಪೂರ್ವದಲ್ಲಿ
ಅನಾದಿ ಕಾಲದಾದಿಯಲ್ಲಿ
ಬ್ರಹ್ಮನಿರಲು ತಪಸಿನಲ್ಲಿ
ಕುಣಿದೆಯವನ ಎದುರಿನಲ್ಲಿ
ಕೊನರಿತೆನಲು ಮಿಂಚುಬಳ್ಳಿ
ಹೇ ಸುಂದರಕಲ್ಪನೆ
ಚಿರ ಚೆಲುವಿನ ಚೇತನೆ!

ಸುರಪ್ರಜ್ಞೆಯು ಉನ್ಮೇಷಿತ
ಲೀಲಾತುರ ಮನಸ್ಫೂರ್ತಿತ
ಈ ವಿಶ್ವವು ಉಲ್ಲೇಖಿತ-
ವಾಯ್ತು ಕಾಲಪಟದಲಿ
ನಿನ್ನ ಭವ್ಯ ಕಲೆಯಲಿ!

ನೀ ಬ್ರಹ್ಮನ ಕಮಲಾಸನ
ವಿಶ್ವ ಕವಿಯ ನವಿಲಾಸನ
ಕ್ಷಣ ಕ್ಷಣಗಳ ಪದ ಬಂಧನ
ಓಂಕಾರದ ಸ್ವರ ಸ್ಪಂದನ
ರಚಿತ ಕಾವ್ಯನಂದನ
ಚೆಲುವು ನೀ ಚಿರಂತನ!

ನೆಲಜಲಗಳ ಈ ಪರಿಸರ
ಜ್ಯೋತಿರ್ಮಯ ನೀಲಾಂಬರ
ದಿಗ್ದಂತಿಯ ತಟ ಸುಂದರ
ತುಂಬಿ ಹರಿಯೆ ಸುಖ ಸಮೀರ
ಈ ಜೀವನವೇ ನಿರಂತರ
ದೇವ ನಾಟ್ಯಚಾಲಕ
'ನಟ'ಯು ನೀನು ಕಲ್ಪಕ !

ಏಕಂ ಸತ್ ಹಲವಾಯಿತು
ಬಣ್ಣದ ಬಗೆ ಚೆಲುವಾಯಿತು
ಇಳೆನೇಸರ ಸುತ್ತರಿಯಿತು
ಹಗಲಿರುಳಿನ ಬೆಂಬತ್ತಿತು
ಋತುಋತುಗಳ ಕಳೆಯರಳಿತು
ಸೊಗದುಟಿಯಲಿ ಕಹಿಯಿಳಿಯಿತು
ಮುನ್ನಡೆಯಿತು ನಾಟಕ
ನವರಸಗಳ ಪೋಷಕ !

ನೀ ಚೆಲುವಿನ ಮೂಲ ಕಿರಣ
ಮನದಾಸೆಯ ಮಿಂಚಿನ ಕಣ
ಎದೆಯೊಲವಿಗೆ ಪ್ರಾಣಪವನ
ನೀನದಮ್ಯ ಚೇತನೆ
ಭಾವಸ್ಫುರಣ ಕಾರಣೆ !

ಅಳಿದು ಹೋದ ಜಗದೋರುವೆ
ನಾಳೆ ಬರುವ ಯುಗ ತೆರೆಯುವೆ

ಇಂದಿಗು ಚೆಲುವಿತ್ತು ಮೆರೆವೆ
ಲೋಕಕೆ ಸವಿದೋರುವೆ
ಮೋಹದಿ ಜನ ಬಿಗಿಯುವೆ !

ಹೇ ಕಲ್ಪನೆ ನೀನು ಮಮತೆ
ಸಾನುಭೂತಿ ಜಲದ ಒರತೆ
ಜನದೆದೆಯಲಿ ಕೊರೆವ ಕೊರತೆ
ನೀನು ತುಂಬಿ ತುಳುಕುವೆ
ಹಣೆಗೊಲವನು ಸವರುವೆ !

ಇದು ಮರಣಘೋರ ಶಯ್ಯೆ
ಅಲ್ಲಿ ನಿಲಲು ನಿನ್ನ ಛಾಯೆ
ಯಮನೆನಿಸನು ಮೋಹ ಮಾಯೆ
ನಮೋ ನಿನಗೆ, ಕಾವ ತಾಯೆ!
ನಿಲ್ಲು ನಮ್ಮ ಹೃದಯದಿ
ಭಾವಸರಸ್ತೀರದಿ !

ನೀ ಕೆತ್ತಿದೆ ದೇವ ಮೂರ್ತಿ
ಮನದಿ ಬಿತ್ತಿ ಭಾವ ಭಕ್ತಿ
ದೇವನೊಲಿಪ ಸುಧಾಸೂಕ್ತಿ
ತೆರೆದು ತೋರೆ ಕೊನೆಯ ಮುಕ್ತಿ
ವೇದವೆಲ್ಲಿ 'ನೇತಿ,ನೇತಿ'
ಅಲ್ಲಿ ಮಾರ್ಗದರ್ಶಿನಿ
ಮಂತ್ರ ಮುಗ್ಧ ಹಾಸಿನಿ !

ಜನವಾಗಿದೆ ಹಾಳು ಹೋಳು
ಕಹಿಯಾಗಿದೆ ಜಗದ ಬಾಳು
ಬರಡಾಗಿದೆ ಕೊರಡು ಕರುಳು
ತೆರೆ ನಿನ್ನಯ ತಾಯ ತೋಳು
ಒಲವಿನ ಸಿರಿ ತುಳುಕಲಿ
ಕೆಳೆಯ ಚೆಲುವು ಅರಳಲಿ !

ಎರಡಾಗಿರೆ ಹೆಣ್ಣು ಗಂಡು
ಜಗದಿರವಿನ ಕುಟಿಲ ಕಂಡು
ತೆರೆಯೆ ತಾಯೆ ಸ್ನೇಹಸದನ
ಎದೆ ಬೆರೆಯುವ ಬಂಧನ
ದೇವಿ ನಿನಗೆ ವಂದನ
ದೇವಲೋಕ ನಂದನ !

ನಾ ವಿರಹಿತ ದೈವಹೀನ
ಶೋಕ ವಿದ್ಧ ವಿಕಲ ದೀನ
ಬಾ ಕಲ್ಪನೆ, ಭಾಗ್ಯಕಿರಣ
ಪದ್ಮರಾಗ ನಿನ್ನ ಚರಣ
ನನ್ನೆದೆಯಲಿ ನಿಲ್ಲಲಿ
ಭಾವ ಭಕುತಿ ಬೆಳೆಯಲಿ !

ಬಾಳೆಂಬುದು ಮುಳ್ಳ ಕಂಟೆ
ಬೆಳೆಯಿತೆನ್ನ ರಕ್ತವೀಂಟೆ
ಬಾ ಕಲ್ಪನೆ, ಸ್ವರ್ಗ ದಾಂಟೆ

ನನ್ನೆದುರಲಿ ನಿಂದಿರೆ
ಹೇ ದೇವನ ಇಂದಿರೆ !

ಈ ಅಲುಗಿನ ಬಾಳಿನಲ್ಲಿ
ಮೊನೆ ಮುರಿಯುವ ಚೆಲುವ ಚೆಲ್ಲಿ
ಸಪ್ತ ವರ್ಣ ನೃತ್ಯ ಕೆರಳಿ
ಕಂಪು ತಂಪು ಹೊಮ್ಮಿ ಬರಲಿ
ಒಲವಿನ ಹೂ ಹರುಷ ನಿಲಲಿ
ಜ್ವಲದ್ದೀಪ ಮಲ್ಲಿಕೆ
ಬಾರೆ ಹೃದಯ ತಲ್ಪಕೆ !

ನಿನ್ನ ಒಲವು ನಿನ್ನ ಚೆಲುವು
ಸ್ವಪ್ನಲೋಕದಮಿತ ನಲಿವು
ನಮ್ಮ ಬಾಳಿಗಿದೇ ಬಲವು
ನಿನ್ನೆಡೆಯಲಿ ಜಗದ ಇರವು
ಬಾ ನಿಂದಿರು ಕಲ್ಪನೆ
ಇದೆಯೊಂದೇ ಪ್ರಾರ್ಥನೆ !

---

# ಮೇಘಮಯೂರ

ಕುಣಿಯ ತೊಡಗಿತು ಮೇಘಮಯೂರ
ಭವ್ಯಭೀಕರಾ ಬೃಹದಾಕಾರ
ರುದ್ರವಾದರೂ ಶುಭಶ್ರೀಕಾರ
ಕುಣಿಯ ತೊಡಗಿತು ಮೇಘಮಯೂರ ।

ಗಗನರಂಗವನು ತುಂಬಿ ಬೆಳೆಯಿತು
ಚಿಕ್ಕೆಗಣ್ಣಿನಾ ಪಿಚ್ಛ ಹರಡಿತು
ಸಿಡಿಲು ಮಾಲೆಯುಲಿ ಮುಡಿಯ ಕಟ್ಟಿತು
ಥಕಥೋಂ ಥಕಥೈ ಕಾಲು ಹಾಕಿತು ।

ಹೆಜ್ಜೆ ಹೆಜ್ಜೆಯಲಿ ಗೆಜ್ಜೆ ನುಡಿಯಿತು
ಮೃದಂಗ ಬಾನೊಳು ಗುಡುಗು ಮೊಳಗಿತು
ಪದ ಘಟ್ಟನೆಯಲಿ ಭುವನ ನಡುಗಿತು
ಕುಣಿದ ಭಾವದಲಿ ಮಿಂಚು ಮೆರೆಯಿತು ।

ಋಷಿಯ ದೇಗುಲದ ಬಾಗಿಲೆದುರಿನಲಿ
ಚಿಕ್ಕೆ ಚಿಗಿತ ಅಂಗಳದ ರಂಗದಲಿ
ದೇವದಾಸಿ ಕುಣಿದಂತೆ ಕುಣಿಯಿತು
ದೇವಲೋಕವೇ ನಿಂತು ನೋಡಿತು ।

ಹಾಲು ಜೇನು ಜಲಕುಂಭವೆತ್ತಿತು
ನೀಲಕಂಠನಭಿಷೇಕ ನಡೆಯಿತು
ಜಗ ಮೂಕವಾಗಿ ತಲೆವಾಗಿ ನಿಂತಿತು
ಇಂದ್ರಲೋಕವತಿ ಚಕಿತವಾಯಿತು |

ಮುರಿಯ ಬಂದಿತೆನುವಂತೆ ಕುಣಿಯಿತು
ಪ್ರಮತ್ತ ಪ್ರಳಯಾವೇಶ ಬೆಳೆಯಿತು
ಸುಪ್ತ ಸಮೀರಣ ರೊಚ್ಚಿಗೆದ್ದಿತು
ಸಪ್ತ ಸಮುದ್ರದಿ ಹುಚ್ಚು ಕುಣಿಯಿತು |

ಬೆಂದ ನೆಲವು ಎದೆ ತೆರೆದು ಬೇಡಿತು
ಕಮರಿ ಹೋದ ಕಾಡೆಲ್ಲ ಕೆದರಿತು
ಕಣ್ಣು ಹಿಗ್ಗಿಸುತ ಗುಡ್ಡ ನೋಡಿತು
ವಿಶ್ವವೆಲ್ಲ ಹಾತೊರೆದು ನಿಂತಿತು |

ಮರಣ ಬಂದರೂ ಹರಣ ಸೊಕ್ಕಿತು
ಚರಣ ಚರಣದಲಿ ಜೀವ ಚಿಗುರಿತು
ಹಚ್ಚ ಹಸಿರು ಹುಚ್ಚೆದ್ದು ಚಿಮ್ಮಿತು
ಬಣ್ಣ ಬಣ್ಣಗಳ ಬಾಳು ಬೆಳೆಯಿತು |

ಮಣ್ಣನೆತ್ತಿ ಅರಮನೆಯ ಕಟ್ಟಿತು
ಇಂದ್ರ ಚಾಪಗಳ ಚೆಲುವ ತೋರಿತು
ಬೆಂದ ಬಾಳಿನಲಿ ತಂಪನೆರೆಯಿತು
ಬಂದುದೆಲ್ಲ ಬಹು ಚಂದವಾಯಿತು |

ತೊಳೆದು ಹೋಯಿತೆಲೆ ಜಗದ ವ್ಯೆಲಿಗೆ
ಇಟ್ಟಿತೆಲ್ಲೆಡೆಗೆ ಧೂಪ ದೀವಿಗೆ
ಮನದಿ ಅರಳಿಸಿತು ಜಾಜಿ ಮಲ್ಲಿಗೆ
ಭಾವ ಭಕುತಿಯಲಿ ದೇವ ಪೂಜೆಗೆ |

ಕುಣಿಯ ತೊಡಗಿತು ಮೇಘಮಯೂರ
ಭವ್ಯ ಭೀಕರ ಬೃಹದಾಕಾರ
ರುದ್ರವಾದರೂ ಶುಭ ಶ್ರೀಕಾರ
ಕುಣಿಯತೊಡಗಿತು ಮೇಘಮಯೂರ.

---

# ಉಷಾ-ವೀಣೆ

ಉಷೆಯು ವೀಣೆಯ ನುಡಿಸುತಿರುವಳು
ಯಾವ ರಾಗದ ಮಧುವನು
ತಂತಿ ಕಂಪಿಸೆ ಚಿಮ್ಮಿ ಬರುವುದು
ಗಾನದೈಸಿರಿ ನೆಗೆವುದು

ವಿಶ್ವಕಮಲವು ಅರಳಲಿರುವುದು
ಬೆಳಕಿನಲಿ ನಗೆ ಮೊಲ್ಲೆಯು
ಭೂಮಿದೇವಿಯ ಮನವು ಚಿಗಿವುದು
ಮುಗಿಲ ಮುಟ್ಟುತ ಮೆರೆವುದು.

ಹೃದಯಶತದಲ ಸುಮನ ಬಿರಿವುದು
ಸುಖದ ಸುಧೆಯೋ ಸುರಿವುದು
ದಿವ್ಯಗಾನದ ಮಾಯೆ ಹರಡಿರೆ
ಎಲ್ಲ ಜೀವಕು ಮೋದವು.

ಗಾನ ಮೋಹದ ಸುಪ್ತಿ ಸುಖದಲಿ
ಜನಿಸಿದೆಳನಗೆಗನಸೆನೆ
ಎಲರಗಂಪಿನ ಲಹರಿ ಲಹರಿಗೆ
ಕೆಂಪು ನೀಲಿಯ ಶೋಭನೆ !

ಹಸಿರು ಬೆಳೆ ಹೂ ಹಕ್ಕಿ ಕರುಗಳು
ಗಾನರಸದಲಿ ಬೆರೆವುವು
ಬಾಳ ಶತ ಶತ ಕೋಟಿ ತೆರೆಗಳು
ಒಂದೆ ಕಡಲಲಿ ಮೊರೆವುವು

ಎದೆಯು ಕರಗಿತು, ಮನವು ಮರೆಯಿತು
ವಿಶ್ವದಗಲಕೆ ಬೆಳೆಯಿತು
ಚೆಲುವ ಕಂಡಿತು, ಮಧುವ ನೀಂಟಿತು
ದೇವಹೃದಯವ ಸೇರಿತು!

---

# ವಸಂತ ಲಕ್ಷ್ಮಿ

ಇಳೆಗೆ ಬಂದಳದೋ ಲಕ್ಷ್ಮಿ
ಮಧುವಮಾಸದ ಅಮೃತ ರಶ್ಮಿ !

ಮಿಂದು ಬಂತು ನೆಲಜಲ
ಸ್ವಾಗತಿಸಿತು ಭೂತಲ
ದಿಸೆ ದಿಸೆಯೂ ಹೊಳೆವ ಹವಳ
ಸ್ವಸ್ತಿ ಲಿಖಿತ ಹೊಸ್ತಿಲ !

ಗಗನ ಕರದ ನೀಲಕಮಲ
ಅರ್ಘ್ಯವೀಯೆ ಕಿರಣ ಸುಜಲ
ಕೈ ಮುಗಿಯಿತು ಜೀವಕುಲ
ಭಾವ ಪಕ್ವ ಫಲವಲ !

ಪುರೂರವನ ಎದುರು ನಿಂತ
ಇವಳಪ್ಸರೆ ಊರ್ವಶಿ !
ಬಾನ್ನೆಲದಲಿ ಬೆಳದನಂತ
ಮತ್ತಧವಳ ಸುಖಶಶಿ !

ಜನ ಬನಗಳ ಅಂತರಂಗ
ಮಥಿಸಿ ಬಂತು ಹೃತ್ತರಂಗ

ವಿಶ್ವವಾಯ್ತು ನೃತ್ಯರಂಗ
ಈ ವಸಂತ ಲಕ್ಷ್ಮಿಗೆ !

ಹಸುರಿನ ಕೊನೆ ಕೆಂಪೊಡೆಯಿತು
ಎಡೆಯೆಡೆಯಲಿ ಕಂಪಡರಿತು
ಹಸಿದೆದೆಯಲಿ ಕಂಡರಸಿತು
ಕನಸಿನ ಕಮನೀಯತೆ !

ಸುಳಿದಾಡಿತು ಗಂಧಪವನ
ಸ್ಫೂರ್ತಿಸಿರಲು ಪ್ರೇಮ ಕವನ
ತುಂಬಿತುಟಿಯು ನುಡಿಸಿಯದನ
ಬನ ಬನವನು ಕುಣಿಸಿತು !

ಅದೊ ಕೋಕಿಲ ಮತ್ತಗೀತ
ವನಮೋದದಿ ರೋಮಾಂಚಿತ
ಹೆಣ್ಣುಗಂಡು ಕಾಮವ್ಯಥಿತ
ಸುಖ ಝೇಂಕೃತ ಭಾವವು !

ವೈರಾಗ್ಯದ ಬಗೆ ಚೆದರಿತು
ಅನುರಾಗದ ತಪ ಕೊನರಿತು
ನಂಜುಂಡನ ತುಟಿ ಅದುರಿತು
ಅಶುಭದ ವಿಷ ನೆಕ್ಕಿತು !

ಯುಗ ಯುಗಗಳ ಸೃಜನಗೀತ
ಹೊಮ್ಮಿ ಬರಲು, ವಿಶ್ವ ಪ್ರೀತ

ಈ ಲೋಕವು ಪುಣ್ಯ ತೀರ್ಥ
ಹೃನ್ನದಿಗಳು ಬೆರೆಯಲು !

ಸಂಸಾರದ ಕಟು ಬಂಧನ-
ವಾಯ್ತು ಇಂದು ನವನಂದನ
ಎದೆಯೆದೆಯಲಿ ಮಧು ನರ್ತನ
ನಗೆ ಕೊನರಿತಕಾರಣ !

ಬಾರೆ ಬಾರೆ ಭಾಗ್ಯಲಕ್ಷ್ಮಿ
ನಾಕ ತೊರೆದ ಪುಣ್ಯರಶ್ಮಿ
ಜಗ ಕೋರಿದೆ ಸುಸ್ವಾಗತ
ಬಾರೊಲವಿನ ಅಭ್ಯಾಗತ !

---

# ರಾಧಿಕೆ

ಬಾ ಬಾರೆ ರಾಧಿಕೆ
ಶೂನ್ಯವಾದ, ದೀನವಾದ ನನ್ನ ಹೃದಯಕೆ।

ಗರುವದ ಶಿಲೆ ಕತ್ತರಿಸಿದೆ
ವಿನಯದ ಶಿಲೆ ಹೊರ ಹೊಮ್ಮಿದೆ
ಬಾರೆಲೆ ತಡವೇತಕೆ
ಬಾ ಬಾರೆ ರಾಧಿಕೆ।

ವನವನದಲಿ ಸಂಚರಿಸಿದೆ
ನಿನ್ನ ಹೆಸರನುಚ್ಚರಿಸಿದೆ
ಕರೆದೆ ಸಖಿಯೆ ಸನಿಹಕೆ
ಬಾ ಬಾರೆ ರಾಧಿಕೆ।

ಬೇರೆ ಯೊಲವ ಕಂಡು ಬಲ್ಲೆ
ಅವುಗಳೆಲ್ಲ ಗರಳ ಬಾಲೆ
ನೀ ಹೃದಯದ ಕೃತ್ತಿಕೆ
ಬಾ ಬಾರೆ ರಾಧಿಕೆ।

ಮೋಹದ ಉನ್ಮತ್ತ ಮಾಲೆ
ಮನದಾಗಸ ತುಂಬಿ ನಿಲೆ

ಮಿಂಚಿನ ಕೋಲ್ ಬಾಲಿಕೆ
ಬಾ ಬಾರೆ ರಾಧಿಕೆ |

ನಾನುರಿಯುವ ಬಂಜೆ ನೆಲ
ನೀ ವಸಂತ ವೈಭವ ವಲ
ಅರಳು ಬಾರೆ ಚೆಲವಿಕೆ
ಬಾ ಬಾರೆ ರಾಧಿಕೆ |

ನೀ ವಿಶ್ವದ ದಿವ್ಯ ಚೆಲುವು
ನಾನು ಹಸಿದ ಹೃದಯ ದೊಲವು
ತಣಿವ ತಾರೆ ಜೀವಕೆ
ಬಾ ಬಾರೆ ರಾಧಿಕೆ |

ತುಟಿಗೆ ಬಾರೆ ನೀನು ಮುರಲಿ
ಎದೆಗೆ ಇಳಿಯೆ ಭಾವ ಕೆರಳಿ
ಹೊಮ್ಮಿ ಬರಲಿ ಗೀತಿಕೆ
ಬಾ ಬಾರೆ ರಾಧಿಕೆ |

ನೀ ಪ್ರೀತಿಯ ನಿಜ ದೇವತಿ
ನನ್ನ ಹರಣ ಪಂಚಾರತಿ
ಗೈವೆ ಬಾರೆ ಹೃದಯಕೆ
ಬಾ ಬಾರೆ ರಾಧಿಕೆ

———

# ಸಂಗಮ

ನಾನು ನೀನು ಬೇರೆ ಏನು ?
ಒಲಿದು ಬೆರೆತ ಹಾಲು ಜೇನು !

ಯುಗ ಯುಗಗಳ ಬಲಿದ ಆಸೆ
ಜನ್ಮಾಂತರಗಳ ಪಿಪಾಸೆ
ಫಲಿಸಿ ಬಂದ ಹೃದಯಂಗಮ
ನಮ್ಮೆದೆಗಳ ಸಂಗಮ ೧

ಗಂಗೆ ಯಮುನೆ ಕೂಡಲಿಲ್ಲ
ಕರಿದು ಬಿಳಿದು ಬೆರೆಯಲಿಲ್ಲ
ನಾನು ನೀನು ಬೇರೆಯಲ್ಲ
ಅತುಲವೀ ಸಮಾಗಮ ೨

ಆಕಾಶದ ಚಿಕ್ಕೆ ಬೆಳೆಯು
ಕಡಲೊಡಲಿನ ರತ್ನ ಕಳೆಯು
ಎಣಿಕೆಯಿರದ ಬುವಿಯ ಸಿರಿಯು
ನಮ್ಮೊಲವನು ಮೀರದು ೩

ಕೂಡಿ ಬರಲು ನೀನು ನಾನು
ಉದಿಸಿ ಬಂತು ದೈವ ಭಾನು

ಈ ಪ್ರೀತಿಯ ಪುಣ್ಯ ಸಾನು
ಕೊನೆಯಿಲ್ಲದೆ ನಿಲ್ಲಲಿ ೪

ನಮ್ಮೊಲವೇ ಚೆಲುವಿನ ಸಿರಿ
ಈ ನಲಿವೇ ನಿಜದ ಲಹರಿ
ಆಶಿಷಗಳ ಕರೆವನು ಹರಿ
ಒಲಿದೆಮ್ಮಯ ಬಾಳಿಗೆ ೫

---

# ಸಂಧ್ಯಾ-ಸೂಕ್ತ

ಇಂದು ಸಂಜೆಯ ನಿಟ್ಟು ನಿಟ್ಟಿಗೆ
 ಬೆಳೆದು ನಿಂತಿದೆ ಸಂಪದ
ಹಕ್ಕಿ ಹಾರಿದ ಹಾಗೆ ಹರಿಯಿತು
 ಮನದಿ ಊರಿದ ಆಪದ

ಚೆಂಗುಲಾಬಿಯ ಬನವು ಅರಳಿದೆ
 ನೋಡು ಬಾನಿನ ದಂಡೆಗೆ
ಪ್ರಾಣ ಶುಕವೇ ಕ್ಷುಬ್ಧವಾಯಿತು
 ಬಂತು ಕಣ್ಣಿನ ಕಿಂಡಿಗೆ

ಸ್ವರ್ಗಲೋಕದ ಸ್ವರ್ಣ ದ್ವಾರವು
 ತೆರೆಯಿತೆನುವೊಲು ಅರೆಚಣ
ಸಂಜೆಗೆಂಪಿನ ಸುಮನ ಕಾಂತಿಗೆ
 ತುಂಬ ಹೊತ್ತಿತು ಪಡುವಣ.

ನೋವು ನರಳಿಕೆಯಿಂದ ನವೆದಿಹ
 ಜಗದ ಕೊರಳಿಗೆ ತಾಯಿತ
ಸುತ್ತಿಕೊಂಡಿದೆ ಸಂಜೆಗೆಂಪಿನ
 ಮುತ್ತು ಮಾಲೆಯು ಮಂತ್ರಿತ

ದೇವ ಮಮತೆಯ ಕೈಯು ಚಾಚಿತು
ತಂಪು ಗಾಳಿಯ ಸುಳಿಯಲಿ
ಬೆಂದ ಹಣೆಗಳ ಬೇಗೆ ಸವರಿತು
ಶಾಂತಿಯೆರಚಿತು ಎದೆಯಲಿ.

ಮಡದಿ ಮಕ್ಕಳ ಮಮತೆ ನುಡಿಸಿತು
ಹಕ್ಕಿಯುಲಿಯುವ ಚಿಲಿಪಿಲಿ
ಕಿರಣ ಶಿಶುಗಳ ಚರಣ ಕಿಂಕಿಣಿ
ನಾದ ತುಂಬಿತು ಜಗದಲಿ

ಜಗದ ಬಗೆವಟ ಹರಡಿ ನಿಂತಿತು
ಟೊಂಗೆ ಟೊಂಗೆಯು ಕೊನರಿತು
ಗಾಳಿಗಡಲಿನ ತೆರೆಗೆ ನಾಕೆಯ
ಹಾಗೆ ಉಯ್ಯಾಲೆಯಾಡಿತು.

ಕಾಲದಿಕ್ತಟ ದಾಟಿ ಸೇರಿತು
ನೆನಹು ಹಕ್ಕಿಯ ಸಂಕುಲ.
ಕಳೆದ ಸತ್ವ ವಿಭೂತಿ ನೆರೆಯಿತೊ
ಎನ್ನುವೊಲು ತಾರಾಕುಲ

ನೋಡ ನೀಡದಿ ಚಿಕ್ಕೆ ಹಕ್ಕಿಯು
ತುಂಬಿ ತುಳುಕುವ ಪಿಕರುತಿ
ಕಾಲವೀಣೆಯು ಮಿಡಿಯ ತೊಡಗಿತೊ
ದೇವ ವಾಣಿಯ ಆ ಶೃತಿ

ಸಪ್ತ ಋಷಿಗಳ ವೇದ ವಾಣಿಯು
ಉಸುರಿತಾ ಗಾಯತ್ರಿಯು
ಯಮನ ಜಯಿಸಿದ ಸತ್ಯ ಹೊಮ್ಮಿತು
ಕರೆಯಿತಾ ಸಾವಿತ್ರಿಯು

ವ್ಯಾಸ ವಾಲ್ಮೀಕಿಯರ ಪ್ರತಿಭೆಯು
ಗಂಗೆ ಬಾನೊಳು ಹರಿಯಿತು
ಧರ್ಮ ಭೀಮರ ರಾಮ ಹನುಮರ
ವೀರ ತೇಜವು ಚಿಮುಕಿತು.

ಕ್ರಿಸ್ತ ನೇರಿದ ಶಿಲುಬೆಯಿಂದಲಿ
ಸುರಿದ ರಕ್ತದ ಹನಿಯಲಿ
ಸಾವನರಿಯದ ಸೊಲ್ಲು ಗುಡುಗಿತು
ಚಿಕ್ಕೆ ಚಿಕ್ಕೆಯ ಎಡೆಯಲಿ

ಬುದ್ಧ ಬೋಧಿಯು ಮತ್ತೆ ಚಿಗುರಿತು
ಜಿನನ ವಾಣಿಯು ಅರಳಿತು
ಸೋತು ಸರಿದಿಹ ತತ್ವವೇತ್ತರ
ಶಬ್ದ ಸೌಷ್ಠವ ಕೊನರಿತು.

“ಬೆಂದು ಬಳಲಿದ ಜಗದ ಜೀವವೆ,
ಏಳು ಕುಡಿಯಲು ಸಿಡಿಲನು
ಮರೆತ ಮಾತಿನ ಹಣ್ಣು ಹಂಪಲ-
ದಿಂದ ತುಂಬಾ ಮಡಿಲನು

ಏಕೆ ಅಶುಭದ ಹೊಲೆಗೆ ಅಳುಕುವೆ
ಸಾವಿನಲಿ ನೀ ಬಾಳುವೆ
ಅಮೃತ ಪುತ್ರರ ಪಿತಗೆ ಭಯುವೆ,
ನೀನೆ ಎಂದಿಗು ಆಳುವೆ"

ಕಾಲಸಾಗರ ಕೆರಳಿ ಕೆದರಿತು
ನಾದ ಹೊಮ್ಮಿತು ತೆರೆತೆರೆ
ಹಾಲ ಸಾಗರ ನಂದ ಕಂದನು
ನೋಡು ನಕ್ಕನು ಜಗದೊರೆ

"ಕ್ಲೈಬ್ಯಂ ಮಾಸ್ಮಗಮಃ ಪ್ರಾಣೀ
ಸಲ್ಲದಿದು ನಿನಗೆಂದಿಗು
ಕುರುಕ್ಷೇತ್ರವಿದು ಧರ್ಮಕ್ಷೇತ್ರವು
ಉಂಟು ಕೊನೆಯಾ ಸಾವಿಗು."

---

# ಮುಚ್ಚು ಮುಚ್ಚು ಬಾಗಿಲ

ಮುಚ್ಚು ಮುಚ್ಚು ಬಾಗಿಲ
ಜೀವವಾಯ್ತು ವ್ಯಾಕುಲ.

ಹೊರಗೆ ಬರಿಯ ಬಿಸಿಲು ಧೂಳಿ
ದೇಹ ಮನವನೆಲ್ಲ ಹೂಳಿ
ಮೇಲೆ ಕುಣಿವಳವಳು ಕಾಳಿ
ನೋವು ನರನ ಕೊರಳ ತಾಳಿ !
ಮುಚ್ಚು ಮುಚ್ಚು ಬಾಗಿಲ
ಜೀವವಾಯ್ತು ವ್ಯಾಕುಲ.

ಎಲ್ಲ ಕಡೆಗೆ ವಿಷದ ಗಾಳಿ
ತಡೆಯಲಾರೆ ಅದರ ದಾಳಿ
ನನ್ನ ಬಾಳು ಬಿಳಿಯ ಹಾಳಿ
ಗೀಚುತಿಹರು ದುಃಖ ಬಳ್ಳಿ
ಎಂಥ ಕೀಳು ಜನವಲ
ಮುಚ್ಚು ಮುಚ್ಚು ಬಾಗಿಲ.

ನನ್ನದು ಇದು ಸಖಿ ದೇಗುಲ
ನೀ ಕಟ್ಟಿದ ಮನೆ ಮಂಗಲ
ನಿನ್ನೊಲುಮೆಯ ಸಿರಿ ಸೋಜ್ವಲ
ಚಂದ್ರಚಾರು ಮನ ಬಾಂದಳ

ನನ್ನಾಸೆಯ ತವರಲ
ಮುಚ್ಚು ಮುಚ್ಚು ಬಾಗಿಲ.

ದೈವೋದ್ಧತ ಪ್ರಹರಿತ ಧರೆ
ಜನಮನವನು ಕಚ್ಚಿತು ಜರೆ
ಸ್ನೇಹಮೂರ್ತಿ ನೀ ನಿರ್ಜರೆ
ನಿನ್ನೆಡೆಯಲಿ ಇಲ್ಲ ಅರೆ
ಮುಚ್ಚು ಮುಚ್ಚು ಬಾಗಿಲ
ಜೀವ ವಾಯ್ತು ವ್ಯಾಕುಲ.

ಕುಣಿಯುತಿರಲಿ ಕೆಡುಕು ಪಡೆ
ಈ ಹೊಸತಿಲದಾ ಹೊರಗಡೆ
ನೀನಿರುತಿರೆ ನನ್ನ ಕಡೆ
ಬೇಕೆ ಬೇರೆ ಅಡ್ಡಿ ತಡೆ
ಸಖಿಯೆ ನೀನು ಸ್ನೇಹಲ
ಮುಚ್ಚು ಮುಚ್ಚು ಬಾಗಿಲ.

ಕಮಲೋದರದತಿ ಕೋಮಲ
ಬೆಳುದಿಂಗಳ ಸುಖ ಶೀತಲ
ಆಲಿಂಗನಕೆದೆ ವ್ಯಾಕುಲ
ವಿಸ್ಮೃತಿಗಿದು ಮಧು ಫೇನಿಲ
ನಿನ್ನ ಪ್ರೀತಿ ನಿಶ್ಚಲ
ಮುಚ್ಚು ಮುಚ್ಚು ಬಾಗಿಲ.

ಮುರಿದೆದೆಯಲಿ ನಾ ಬಂದರೆ
ಇದೆ ತೋಳ್ಗಳ ಈ ಸವಿಸೆರೆ

ದಣಿದವನಿಗೆ ನಿನ್ನಾಸರೆ
ನಗೆ ನಯುಗಳು, ಮಧುರಾಧರೆ !
ಮುಚ್ಚು ಮುಚ್ಚು ಬಾಗಿಲ
ಜೀವವಾಯ್ತು ವ್ಯಾಕುಲ.

ಯಾವ ದೈವ ಜೋಡಿಸಿಹುದು
ನಮ್ಮೆದೆಗಳ ಕೂಡಿಸಿಹುದು
ಮಂಗಲವನು ಮೂಡಿಸಿಹುದು.
ಕೆಡುಕೆಲ್ಲವನೋಡಿಸಿಹುದು
ಮುಚ್ಚು ಸಖಿಯೆ ಬಾಗಿಲ
ತೆರೆದು ಹೃದಯ ಸ್ನೇಹಲ
ಹೊಮ್ಮಿಸುತ್ತ ಪರಿಮಳ.

---

# ಭಾಗ್ಯಸಖಿ

ಮನೆಗೆ ಬಂದೆ ಭಾಗ್ಯ ಸಖಿ
ಅಂದು ನೀ ವಿವಾಹಿತ
ಮನದಿ ಬರೆದ ಸ್ವಪ್ನಲಿಪಿ
ಮೃದು ಮೃಣಾಲ ಶಿಲ್ಪಿತ
ತೆರೆಯಿತೆಂದೆ ದೈವಕೃಪಾ
ಜನುಮ ಜನುಮ ವಾಂಛಿತ

ನಿಂತೆ ನೀನು ನನ್ನ ಎದುರು
ನನ್ನ ದೇಹ ನವಿರಿನ ತರು
ಅಡಿಮುಡಿಗಳ ಅದರು ಪದರು
ದಾದಿಡಗಳ ಝೇಂಕೃತ
ಮನದ ಮೂಲೆ ಮೂಲೆಗಳೂ
ಸಪ್ತವರ್ಣರಂಜಿತ

ನನ್ನ ಹೃದಯ ಕೊಳಲ ಬಿದಿರು
ನಿನ್ನೊಲುಮೆಯ ಹಕ್ಕಿ ಹೊದರು
ನನ್ನ ಬಾಳ ಬಾನಿನಲ್ಲಿ
ಸರಿಗಮಗಳ ಮಧುರುತ
ನಿನ್ನ ನುಡಿಯ ಕುಡಿಕುಡಿಯಲಿ
ಸುಧಾಸೇಕ ಅವಿರತ

ನಿನ್ನ ಚೆಲುವು ಎತ್ತಿರುವುದು
ನನ್ನಾಸೆಯ ಕುಂಚಲ
ದಿನವು ಚಿತ್ರ ಬರೆಯುತಿಹುದು
ಸುಖ ಮೋಹಕ ಚಂಚಲ
ದೈವಾಧರ ಅರೆಯುರಳಿದ
ಅರುಣವರ್ಣ ಹಾಸಿತ

ಹೊರಗೆ ಇರಲಿ ಬಿಸಿಲು ಬೇಸಿ
ನನ್ನ ಸುಖಕೆ ಇಲ್ಲ ಕೊನೆ
ನಿನ್ನೆದೆಯಲಿ ನನ್ನ ಮನೆ
ಹುರುಸವಾಯ್ತು ನನೆಕೊನೆ
ನಿನ್ನ ಕೈಯಲೀ ಜೀವಿತ
ವಾಯ್ತು ಸುಮನಗಂಧಿತ.

---

# ಪ್ರಭಾತ

ಇರುಳು ಅಡಗಿ ಮೂಡು ಬೆಳಗಿ
ಕಮಲದಂತೆ ತೆರೆಯಿತು
ಹೃದಯದಿಂದ ಗೀತವೊಂದು
ಹೊಮ್ಮಿ ದೆಸೆಯ ತುಂಬಿತು.

ನಭದ ನೆಲದ ಕೆನ್ನೆಗಿತ್ತ
ಉಷೆಯ ಪ್ರೀತಿ ಚುಂಬನ
ಕೊನರಿಸಿತ್ತೈ ಮನಸಿನಲ್ಲಿ
ಕನಸು ಕಂಡ ನಂದನ !

ಬಾನ ಭಾಲದಲ್ಲಿ ಹೆಣೆದ
ಅರುಣ ಕಿರಣ ಗುಂಫನ
ಮನದ ಭಾವ ವಿಹಗಗಳಿಗೆ
ಆಯಿತೇನೊ ಮಧುವನ !

ನೂರುದಿನದ ಮರೆತ ಮಧುರ
ಸ್ವಪ್ನವೆಲ್ಲ ಕಲೆತವು
ಮೌನವಾಂತ ಅಧರದಿಂದ
ಹರುಷ ಹಾಡು ಸಿಡಿದವು.

ಕೃತಿಯ ತುಂಬಿ ಹೊಮ್ಮಿ ಹರಿದ
ವಿಹಂಗಮದ ಸುಸ್ವರ
ನನ್ನಿ ಜೊನ್ನ ಹನಿವ, ನಲ್ಲೆ,
ನಿನ್ನ ಲಲ್ಲೆ ಬಂಧುರ !

ಪವನ ವೀಣೆ ಮಿಡಿವ ಗಾನ
ವೇದದಂತೆ ಪಾವನ !
ಕೋಟಿ ಕೊರಳೊಳಿಳಿದ ಗೀತ
ಕರಳಿತೊಡನೆ ಮನ್ಮನ.

ಕಲೆತ ಜಗದ ಸಂಘಗೀತ
ದಿಕ್ತಟಾಕ ತುಂಬಿತು
ಮರೆತ ಮನದ ನೂರು ಸುಖದ
ಹಿಗ್ಗು ಹಾಡು ಹೊಮ್ಮಿತು

ತುಂಬಿ ತುಳುಕಿತೆಲ್ಲವನ
ತುಂಬಿ ತುಳುಕಿತೆನ್ನಮನ
ಬಾನ ಬುವಿಯ ತುಂಬಿತೀ
ಪ್ರಭಾತ ಸುಭಗ ನಿಸ್ವನ.

---

# ಅಗ್ನಿಗಾಥ

ಓಂ ಅಗ್ನಿಮೀಳೆ !
ನಡೆದಿದೆ ಒಂದೇ ಮಂತ್ರ ನಿರಂತರ
ನಡುಗಿಸಿ ವಿಶ್ವದ ವಿರಾಟ ಅಂತರ

ಓಂ ಅಗ್ನಿಮೀಳೆ !
ಇದಕ್ಕೆ ಎಲ್ಲಿಯ ವೇಳೆ ಅವೇಳೆ
ಸದಾಸರ್ವದಾ ಅಗ್ನಿಮ್ ಈಳೆ
ಕೋಟಿ ಕಂಠದಲಿ ಕೂಗಿದ ಕಹಳೆ
ನಿನ್ನ ಪೂಜೆಯಲಿ ಲೀನವಾಯಿತಿಳೆ

ಓಂ ಅಗ್ನಿಮೀಳೆ !
ಸರ್ವದೇವತಾ ಜನ ಸಂಪೂಜಿತ
ನೀನೇ ಲೋಕದ ಆದಿ ದೈವತ
ಪ್ರಚಂಡ ತೇಜಃ ಪುಂಜ ಪ್ರಕಾಶಿತ
ಸಮಸ್ತ ವಿಶ್ವಕೆ ನೀನೆ ಪ್ರಾಣಪಿತ

ಓಂ ಅಗ್ನಿಮೀಳೆ !
ಬ್ರಹ್ಮಾಂಡದ ಆ ಮಹಾಕುಂಡದಲಿ
ಉರಿದಳ ಸಾವಿರ ಸ್ವರ್ಣಕಮಲದಲಿ
ಧಿಮಿ ಧಿಮಿ ಉರಿಯುವ ಪ್ರಖರ ಪ್ರಭೆಯಲಿ
ಗಭೀರ ನಿಶ್ಚಲದಾತ್ಮ ಶಾಂತಿಯಲಿ
ರಾರಾಜಿಸುತಿಹೆ ನೀನಲ್ಲಿ.

ಪಾದಪೀಠವದು ಸೂರ್ಯನ ಮಂಡಲ
ರತ್ನ ಕಿರೀಟವು ತಾರಾ ಮಂಡಲ
ಧಿಯೋ ದೀಧಿತಿಯು ಕರ್ಣಕುಂಡಲ
ಅಸಮ ಪುಣ್ಯಮಯ ಮೂರ್ತಿ ಮಂಗಲ
ನೀನೇ ಅಗ್ನಿಯಲ !

ಲೋಕವ ಕಾಯುವೆ ನೀ ಶಿವಶಂಕರ
ವಿಕಸಿಸಿ ಸುಖಯಿಸಿ ಜೀವ ನಿರಂತರ
ಮರಣದ ಮೂರುತಿ ರುದ್ರ ಭಯಂಕರ
ಅಳಿಸುವೆ ಬೆಳೆಸುವೆ ನೀನು ಮಹೇಶ್ವರ
ನೀನೇ ಕರುಣಾಕರ !

ಚಿಕ್ಕೆಯ ಕಿಡಿಗಳ ಸಿಡಿಸಿದ ಭಾನು
ನೀನಿಹೆ ಪ್ರಾಣದ ಪ್ರಚಂಡ ಸಾನು
ನಿನ್ನಯ ಅಡಿಯಲಿ ಹೊಮ್ಮಿತು ತಾನು
ಅನಂತ ಜೀವನ ಜಾಹ್ನವಿಯು !

ಓಂ ಅಗ್ನಿಮೀಳೆ !
ಬಾನ ಬಯಲಿನಲಿ ಬಯಲ ಬಸಿರಿನಲಿ
ಮಲೆಯ ಮುಡಿಯಲೀ ಕಡಲಿನುಡಿಯಲೀ
ಎಲ್ಲ ಇರವಿನಲಿ, ಅದರ ಬಯಕೆಯಲಿ
ಕೊನರಿತು ಕೆದರಿತು ಪ್ರಾಣಪಾವಕಾ
ಜೀವನವೆಲ್ಲ ಊರ್ಧ್ವಶಿಖಿ !

ಬುದ್ಧಿಯೊಳುದಿಸಿತು ತೇಜ ಭಾಸ್ಕರ
ಹೃದಯದಿ ಉಕ್ಕಿತು ಭಾವ ಸಾಗರ

ಧಮನಿಧಮನಿಯಲಿ ಉಕ್ಕಿತು ನೆತ್ತರ
ಕಾಯ ಕಾಯವೂ ಕಾರ್ಯಕಾತರ
ಪ್ರಗಮನವಾಯಿತು ಮನುಜಕುಲ !

ವಸಂತ ವೈಭವ ಬನ ಬನ ತುಂಬಿತು
ಕಾಮೋದ್ದೀಪಿತ ಮನ ಕುಸುಮಿಸಿತು
ಗಂಡಿನ ಜೊತೆಯಲಿ ಹೆಣ್ಣು ಕುಣಿಯಿತು
ಶೃಂಗಾರಕೆ ವಾತ್ಸಲ್ಯಕೊನರಿತು
ನಿನ್ನಯ ಸ್ಫೂರ್ತಿಯಲಿ !

ಹಿಂಗದ ಹಸಿವೆಯ ಹೊಟ್ಟೆಯೊಳಿರಿಸಿ
ಮುಗಿಯದ ಬೆಳೆಯನು ಬುವಿಯಲಿ ಬೆಳಸಿ
ತುಷ್ಟಿ ಪುಷ್ಟಿಯಿರಲೆಂದು ದಿವಾನಿಶಿ
ಹಂಸಿದೆಯೆಂದೇ ಇಹುದ ವಿನಾಶಿ
ಮರ್ತ್ಯರ ಈ ಕುಲವು !

ಅನಂತ ವಾಯಿತು ಪ್ರಾಣಸನಾತನ
ಸಂಸಾರದ ಈ ರೂಪ ವಿನೂತನ
ಸಂತತವಾಯಿತು ಕಾಲನರ್ತನ
ನಿನ್ನಯ ಕರುಣೆಗೆ ಪುಲಕಿತ ತ್ರಿಭುವನ
ಬೆಳೆಯಿತು ಮನುಜ ಮನ !

ಓಂ ಅಗ್ನಿಮೀಳೆ ! ಓಂ ಅಗ್ನಿಮೀಳೆ !
ಬೇಸರ ವಾಯಿತೆ ನಿನಗೀ ಮಾಟ
ಮಾನವ ಕುಲವಾಯಿತೆ ಬರಿಕಾಟ
ಅಂತೇ ಬಂತೇ ಇಂದು ಸಂಕಟ

ಕುಸಿಯಲು ತೊಡಗಿತು ಜೀವ ಪಟ !
ರುದ್ರ ಭಯಂಕರನೆ !

ಮಾನಸ ಮಂದಿರ ಮಧ್ಯಸ್ಥಾಪಿತ
ದ್ವೇಷದ ದೈವತ ವಿಂದು ಪೂಜಿತ
ಭೀತಿಯ ಧೂಪವು ಭುವನ ಪೂರಿತ
ಕೊಲ್ಲುವ ಜಪವೇ ಇಂದು ಸುವ್ರತ
ನಡುಗಿದೆ ಜನ ಸ್ವಾಮಿ !

ಗುಡಿಯ ಗರ್ಭದಲಿ ಮಿನುಗುವ ದೀಪ
ಮಾನವ ಪುಣ್ಯದ ಪಾವನ ದೀಪ
ಸತ್ಯಧರ್ಮಗಳ ನಂದಾದೀಪ
ನಿತ್ಯ ವಿನೂತನ ಜ್ಞಾನ ಪ್ರದೀಪ
ಅಡಗಿತು ಜ್ಯೋತಿಕುಲ !

ಗಂಗಾಜಲದಲಿ ವಿಷವನು ಬೆರಸಿದ
ಅಮೃತ ಕುಂಭದಲಿ ಹುಡಿಯನ್ನೆರಚಿದ
ಮಮತೆಯನೆಲ್ಲ ತೊತ್ತುಳಿದುಳಿದ
ಪಶುವರ್ತನವೇ ನಮ್ಮ ಪ್ರಮೋದ
ಏನಿದು ದುರ್ದೈವ !

ಹಾಲು ಹರಿದ ಕಡೆ ರಕ್ತ ಸುರಿಯಿತು
ಹಗೆಯ ವಹ್ನಿ ಎಲ್ಲೆಲ್ಲು ಜ್ವಲಿಸಿತು
ಯಜ್ಞಕುಂಡವೆನೆ ಭೂಮಿ ಮಂಡಲ
ಮಾನವ ಕುಲವೇ ಸಮಿತ್ತಂಡುಲ
ಮರಣವೆ ಬಂತೆದುರು !

ಮರಣ ಬಂದರೆ ಬರಲಿ, ಇಲ್ಲ ಭೀತಿ
ಜೀವನಕೆಲ್ಲ ಮರಣವೆ ಪ್ರಕೃತಿ
ಆತ್ಮದಧೋಗತಿಯೊಂದೇ ವಿಕೃತಿ
ಅಂತೇ ಬಳಲುವೆ, ಇಂದಿನ ದುರ್ಗತಿ
ಬರಬಾರದು ಯಾರಿಗು !

ನಾರಾಯಣಕುಲಸಂಭವ ಮಾನವ
ಎನಿತುನ್ನತವೀ ಆತ್ಮದ ವೈಭವ
ಕಂಡಿತಿಂದು ಮಾನವತೆ ಪರಾಭವ
ಪಶುಗಳನೆಸಗಿತು ರಕ್ಕಸಭಾವ
ಅಖಿಲ ಜೀವ ಜಾತವ !

ಓಂ ಅಗ್ನಿಮೀಳೆ ! ಓಂ ಅಗ್ನಿಮೀಳೆ !
ಏಳು ಜ್ಯೋತಿಷ್ಮಂತ ಪ್ರಭುವರ
ಬೆಳಗು ಲೋಕವ ಬಾರೊ ಸತ್ವರ
ಕಾಯು ಬಾ ಎನುವೆ !

ನಿನ್ನ ಕಣ್ಣಿನ ಕಿಚ್ಚು ಚಿಮ್ಮಲಿ
ಕೀಳು ಕೊಳೆ ಕೆಡಕೆಲ್ಲ ಅಳಿಯಲಿ
ತೊಳೆಯ ಬಾ, ಕರೆವೆ !
ಸಾಯಬೇಕಾದುದನು ಸಾಯಿಸು
ಲೋಕದೊಳಿತನ್ನೊಂದೆ ಬೆಳೆಯಿಸು
ಬೆಳಗು ಬಾ, ಬೆಳಕೆ !

ಬೆಳೆವ ಕಳೆ ಎಲ್ಲೆಲು ತೊಳಗಲಿ
ಮರಣಛಾಯೆಯ ಭೂತ ತೊಲಗಲಿ
ಬೇಗ ಬಾ, ವಿಭುವೆ !
ಪ್ರಾಣಕಂಟಿದ ಜಾಡ್ಯ ಕಳೆಯಲಿ
ಕೆಚ್ಚುಗೊಳ್ಳಲಿ ಮೇಲೆ ನೆಗೆಯಲಿ
ನೀನೆ ಚೈತನ್ಯ !

ಓಂ ಅಗ್ನಿಮೀಳೆ, ಅಗ್ನಿಮೀಳೆ !
ಜಗದ ಕ್ಷಿತಿಜವನೇರಿ ನಿಂತಿತು
ಕಾಲಸಾಗರದೆದುರು ಕೂಗಿತು
ಜೀವ ಕಾತರದಿ-

ಓಂ ಅಗ್ನಿಮೀಳೆ !
ಜಗದ ಹಿತ ಸಾಧನೆಗೆ ತಪಿಸುವ
ಲೋಕ–ವಿಭು ಋಷಿವರರು ಜಪಿಸುವ
ದಿವ್ಯ ಮಂತ್ರ ವಿದು !

ಜಗದ ರಕ್ಷಣೆಗೆಂದು ನಿಂತಿಹ
ಯಕ್ಷ ಕಿನ್ನರ ಕಂಠಕೊನರಿತು
ಅಗ್ನಿ ಮೀಳೆಯೆನೆ !
ಬುವಿಯ ಅಧರವ ತೊಳೆದು ಬೆಳಗಿತು
ಬಾನಿನುದರವ ಸೀಳಿ ನೆಗೆದಿತು
ನೋಡು ಮಂತ್ರವಿದು !

ಓಂ ಅಗ್ನಿಮೀಳೆ, ಅಗ್ನಿಮೀಳೆ!

ನೆಲದ ನೆರಳುಗಳೆಲ್ಲ ನಡುಗಿದವು
ಕಿರಣ ಶಿಶುಗಳ ಅಧರ ಮಧುಸ್ಮಿತ
ಕುಣಿದು ಆಡಿದವು!

ಓಂ ಅಗ್ನಿಮೀಳೆ, ಅಗ್ನಿಮೀಳೆ!

ಓಂ ಶಾಂತಿಃ ಶಾಂತಿಃ ಶಾಂತಿಃ

---

# ಕ್ಷಿತಿಜಯಕ್ಷ

ಬಾಳ್ಗಡಲು ಕೆರಳಿಹುದು, ಕಾರಿರುಳು ಬೆಳೆದಿಹುದು
ಮನದ ಮನೆಯಲಿ ಭೀತಿ ನಡುಗುತಿಹುದು
ನೀಲಿವ್ಯೋಮಪಥದಲ್ಲಿ ಅಭ್ರರಥ ತಾರೆಗಳ
ತುಳಿದರೆದು ಬಾನೆದೆಯ ಸೀಳಿರುವುದು

ಉಪ್ಪಿ ತಿರೆಯೊಡೆಯನ್ನು ತೆಪ್ಪಗಿಹ ಮೊಲುಗಾಳಿ
ನೂರು ನಾಲಗೆ ಚಾಚಿ ಒದರುತಿಹುದು
-‘ಗುಡ್ಡಗಳ ಚಲಿಸುವೆನು, ಕಡಲನ್ನು ಕಡೆಯುವೆನು
ಸ್ವರ್ಗಸಿಂಹಾಸನವ ನಡುಗಿಸುವೆನು’

ಕಡಲತೆರೆ ಹುಚ್ಚೆದ್ದು ಹಾವಿನೊಲು ಹೆಡೆಗಳನು
ಅಪ್ಪಳಿಸಿ ಅಬ್ಬರಿಸಿ ಮುತ್ತುತಿಹವು
ಮರಣ ಜಿಹ್ವೆಯ ಹಾಗೆ ತುತ್ತಲಿಕೆ·ಸುತ್ತಿಹವು
ತಮ್ಮ ಬಲೆಯನು ಹರಡಿ, ಎಳೆಯುತಿಹವು.

ನನ್ನ ಈ ಕಿರಿ ನಾವೆ ಹಿರಿಗಡಲ ಮಡಿಲಲ್ಲಿ
ಏಳುತ್ತ ಮುಳುಗುತ್ತ ತೇಲುತಿಹುದು
ನೀರಗೋರಿಯ ಕಂಡ ನೂರು ನಾವೆಯ ಕಂಡು
ತತ್ತರಿಸಿ ಒಳಗೊಳಗೆ ಕುಸಿಯುತಿಹುದು.

ತೆರೆಗೆ ತುತ್ತಾಗುವುದೊ ? ದೈವರಕ್ಷಿತವಾಗಿ
ದಂಡೆಯಲಿ ಬಂದರವ ಸೇರಬಹುದೊ ?
–ದಿಗ್ಭ್ರಾಂತ ನಿರೆಯಿಂತು ಆಕಾಶದಂಚಿನಲಿ
ಹೊನ್ನ ಹೊಳೆಯೊಲು ಕಾಂತಿ ಹೊಮ್ಮುತಿಹುದು

ಬಾನ್ನೀರ ಚುಂಬನದ ಚೆಲುವು ಸೈದಿಲೆಯಲ್ಲಿ
ಕಿರಣ ಪಿಚ್ಛವ ಹರಡಿ ಕುಳಿತಿರುವನು
ದೇವನೋ ಯಕ್ಷನೋ, ಸ್ವರ್ಣ ಸುಂದಿರ ರಚಿಸಿ
ಸಾಹಸಕೆ ಕರೆಯುತಿಹ ಶಿಲ್ಪಿವರನು.

ಆದುವೆನಗೆ ನಿಶ್ಚಯವೂ ಧೈರ್ಯ, ಜೀವನ ಸ್ಫುರಣ,
ಆಸೆಗಳ ಚಿರವಾದ ಸುಮುಬಂಧನ.
ಅದ ನೋಡಿದೀ ನಾವೆ ಪಕ್ಕಗಳ ಹರಡುವುದು
ನೀರ್ವಕ್ಕಿಯೊಲು ನೆಗೆದು ಮುನ್ನಡೆವುದು.

---

# ಬೆಳಕು ಬೆಳೆದ ಈ ಹಿತ

ಮನೆಯ ತೊರೆದು ಹೊರಗೆ ಬಾರೆ
ಹುಣ್ಣಿಮೆಯನು ನೋಡಲು
ಇರುಳಿನೆದೆಯು ಹೂತು ಹರಿದ
ಹಾಲಿನಲ್ಲಿ ಮೀಯಲು.
ಹುಣ್ಣಿಮೆಯಿದು ಬಾನ ಬಾಳ
ಪೂರ್ಣಿಮೆಯೇ ಅಲ್ಲವೇ ?
ಬುವಿಯ ಬಯಕೆ ಬಾಯಾರಿಕೆ
ಕಳೆವ ಗಂಗೆಯಲ್ಲವೆ ?
ನಂದನಕ್ಕೆ ನೀರೆರೆಯುವ
ಸಂಜೀವಕ ವಾಹಿನಿ !
ದಿಕ್ತಟಗಳ ದಾಟಿ ಹರಿದ
ಅನುಪಮ ಸಂಮೋಹಿನಿ !
ಬಾಂದೇವಿಯ ಶೃಂಗಾರಕೆ
ಹೂತ ವತ್ಸಲತೆಯಿದು.
ಭೂದೇವಿಯ ಶೃಂಗಸ್ತನ
ತೊರೆದ ಒಲವು ಹಾಲಿದು.
ಬಾಂಗಡಲಿನ ನೀಲಿಮೆಯಲಿ
ಜನಿಸಿ ನೆಗೆದ ಸುರಭಿಯು
ಮದವೇರದ ಮುದಬೀರುವ
ಅತಿ ಮಾನವ ಪೇಯವು.

ಇಂಗಡಲಿದು ಉಡುಲೋಕವ
ಮುಳುಗಿಸುತ್ತ ಬೆಳೆದಿದೆ
ಮೂಲೋಕದ ಮೂಲೆ ಮೂಲೆ
ಯನ್ನು ಮುಟ್ಟಿ ಹರಿದಿದೆ.
ಮಣ್ಣಿನಲ್ಲಿ ಸುರಿದು ಅದಕೆ
ಮಲರ ಮಾಯೆ ಬೀರಿದೆ.
ಕೊಳೆಯಿಲ್ಲವ ಸುತ್ತಿ ಮುತ್ತಿ
ಚೆಲುವನಲ್ಲಿ ಬಿತ್ತಿದೆ.
ಶುಭ ಮಂಗಲ ಪಾವನತೆಯು
ಅಣುರೇಣುವಿಗಿಳಿದಿದೆ
ಪ್ರತಿ ಜೀವದಿ ನವ ಸ್ವಪ್ನದ
ಸಂಗೀತವು ತುಂಬಿದೆ.
ಅಂಗಳದಲಿ ರಂಗೋಲಿಯ
ಮಂಗಲವನು ಬರೆದಿದೆ.
ಹೊಸ್ತಿಲದಲಿ ಸ್ವಸ್ತಿಕವನು
ಬರೆದು ಶುಭವ ಕೋರಿದೆ !
ಅರೆಯಿಲ್ಲದ ತೆರೆಯಿಲ್ಲದ
ನಿಶ್ಚಲ ಚಿರ ಶಾಂತಿಯು
ಮಧು ಮಧುರವು ಅತಿ ಮೃದುಲವು
ಇದರ ದಿವ್ಯ ಕಾಂತಿಯು.
ಇಲ್ಲಿ ಬಾರೆ ಬೆಳುದಿಂಗಳ
ಈ ಮಂಗಲ ಜಲಧಿಗೆ
ಮೆಯನೊಡ್ಡು ಬೆಳಕಿಗಿದರ
ತೆರೆಯುದನು ಶಾಂತಿಗೆ

ಹರಿದೋಡುತ ಹೊರಳಾಡುತ
ಮುಳುಗೇಳುತ ಎಲ್ಲೆಡೆ
ತೆರೆತೆರೆಗಳು ಸೆಳೆದಲ್ಲಿಗೆ
ಕರೆಕರೆಯುತ ಎಳೆದೆಡೆ.

ಈಸಾಡಲು ಮೀನವಾಗಿ
ಹಕ್ಕಿಯಾಗಿ ಹಾರಲು
ಜೊನ್ನ ಕುಡಿದು ಜ್ಯೋತಿಯಾಗಿ
ಬಾನಿನಲ್ಲಿ ಬೆರೆಯಲು.

ಬಾ ಗೆಳತಿಯೆ ಹುಣ್ಣಿಮೆಯಲಿ
ಪೂರ್ಣಾಶಿಷ ಪಡೆಯಲು
ಮನೆಯ ತೊರೆದು ಚಿಂತೆ ಜರೆದು
ಪ್ರೀತಿಗೀತ ಹಾಡಲು

ದೇವರನ್ನು ಕುಣಿಸಿದಂಥ
ಚೆಲುವು ಚಂದ್ರನಮೃತ
ದೀನರನ್ನು ತಣಿಸದಿಹುದೆ
ಬೆಳಕು ಬೆಳದ ಈ ಹಿತ.

---

# ಮಮತೆಯ ಮೂರ್ತಿ

ಬತ್ತಿದಾ ಎದೆಯೊಲವ ವಿಷಮ ವಿಷಸಮ ಬಾಳ
ನಾಳಿನಲಿ ಕಣ್ಣಿಟ್ಟು ನೂಕುತಿದ್ದೆ.
ಹಲಿರುಳು ಬೆಳೆಯುತಿಹ ಕೆಳೆಯ ಚಿಗುರಾಸೆಯಲಿ
ಬರಿದೆದೆಯ ಶೂಲಗಳ ಮರೆಸುತಿದ್ದೆ.

ಕಸಿನಲಿ ಕುಣಿಯುತಿಹ ಚಪಲ ಬಂಧುರರೂಪ
ಕಣ್ಣ ಹಿಡಿಕೆಗೆ ಅಂದು ನಿಲುಕದಾಯ್ತು
ಮದಿ ಮನೆ ಮಾಡಿಯೂ ಮೈಯ ಬಯಕೆಗೆ ಬರದೆ
ಬರಿಯ ಊಹೆಯ ವಿರಲ ಲಹರಿಯಾಯ್ತು

ಸ್ವಪ್ನ ಮಥನದಿ ಸತ್ಯ ಜನಿಸಿತೇನು ?
ಮನದ ಮಮತೆಯ ಮೂರ್ತಿ, ನಲ್ಲೆ, ನೀನು
ಎನ್ನೊಳಗೆ ಸೀ, ಗೆಳತಿ, ಬೆರೆತೆ ಇಂದು
ಹಾಳೆದೆಗೆ ಮಂಗಲದ ಬೆಳೆಯ ತಂದು.

---

# ಕವನ ಕಂಬನಿ !

ರಘುಪತಿ ರಾಘವ ರಾಜಾರಾಮ
ಮಹಾಜೀವನಕೆ
ಇಂದು ಬರೆದೆಯಾ
ದೇವನೆ, ಪೂರ್ಣವಿರಾಮ !
ರಘು ಪತಿ ರಾಘವ ರಾಜಾರಾಮ !

೨

ಪತಿತ ಪಾವನ !
ಪಟೇಲ ಜೀವನ
ವಾಯಿತು ದೇವನ-
ಮುರಲೀವಾದನ
ಸ್ವಾತಂತ್ರ್ಯದ ಆ ವೀರೋದ್ಘುನ
ಬೆಳೆಯಿತು ತಾನ ವಿತಾನ
ದೇವಾ, ಸಖ್ಯ, ಸೌಖ್ಯ, ಸಂಘ
ರಘುಪತಿ ರಾಘವ ರಾಜಾರಾ:
ಪತಿತ ಪಾವನ ಸೀತಾರಾಮ
ವಿಧಿಯ ಘಟನೆಯ:ಲಿ
ಘೋರ ಮರಣದಲಿ
ಪಡೆದಿತು ಗಾನವಿರಾಮ
ಸುಂದರ ಮಾಧವ ಮೇಘಶ್ಯಾ!

೩

ಜರೆಯನು ಜರಿದನು
ಅವನೇ ನಿರ್ಜರ
ದುಡಿಮೆಗೆ ಎಂದಿಗು
ಇಲ್ಲ ಅಂತರ
ಮಿಂಚು ತೂರಿತೆನೆ
ಹರಿಸು ನಿರ್ಝರ
ದೇಹದಿ ಉಕ್ಕಿತು
ಪ್ರಾಣಸಾಗರ
ನಾಡಿನ ಪುಣ್ಯದ
ಉದಿತ ಭಾಸ್ಕರ
ಅದೋ ನಮ್ಮ ಸರದಾರ
ಅವನ ದರ್ಶನ
ಉತ್ಸಾಹದ ಸಂಚಾರ
ರಘುಪತಿ ರಾಘವ ರಾಜಾರಾಮ
ಭಾರತ ಪಂಚ ಪ್ರಾಣ
ಬತ್ತಿತು
ಅಯ್ಯೋ ಮೇಘಶ್ಯಾಮ !

೪

ಆತ್ಮ ಕವಚವದು
ವಜ್ರ ಕೇವಲ
ಒಳಗೆ ಬೆಳೆಯಿತ್ತೈ
ಕಮಲ ಕೋಮಲ
ಭಾರತ ಭಾಗ್ಯದ

ಗಂಧ ಪರಿಮಳ
ಹರಿಯಿತು ಸಾಗರ ಪಾರ
ದೇವಾ,
ಏನು ಮಹಾ ಸರದಾರ !
ಕೇಳು ದೇವನೆ
ದೇಶ ಕೂಗುತಿದೆ
ಅಣ್ಣನ ವಾರಂವಾರ
ರಘುಪತಿ ರಾಘವ ರಾಜಾರಾಮ

೫

ಯುದ್ಧ ಭೂಮಿಯಲಿ
ಸ್ಫುರಣ ಕಾರಣ
ಕಾಡ ಸವರಿದನು
ವೈರಿ ಮರ್ದನ
ನಾಡ ಕಟ್ಟಿದನು
ಭೀಮ ಯೋಧನ
ಸ್ವಾತಂತ್ರ್ಯದ ಸಂಗ್ರಾಮ
ಗೆದ್ದನು,
ಅವನಿಗೆ ಪ್ರೇಮ ಪ್ರಣಾಮ
ರಘುಪತಿ ರಾಘವ ರಾಜಾರಾಮ !

೬

ದೇಹ ಮುರಿದರೂ
ಸಾವು ಬಾರದು
ಅಮೃತ ಪುತ್ರನಾ
ಸತ್ವ ಸರಿಯದು

ಅವನ ಧೈರ್ಯದಾ
ಕವಚ ನಾಡಿಗೆ
ಅವನ ಉಕ್ಕಿನಾ
ಹುರಿಯು ಮನಸಿಗೆ
ಅವನ ಪುಣ್ಯದಾ
ರಕ್ಷೆ ಬೆನ್ನಿಗೆ
ಅವನ ಕನಸಿನಾ-
ಮಾಲೆ ಕೊರಳಿಗೆ
ಅವನ ಧ್ಯೇಯದಾ
ಮೂರ್ತಿ ಕಣ್ಣಿಗೆ
ಇರಲು ಎಲ್ಲಿಯಾ
ಸಾವು ಅವನಿಗೆ

೭

ದುಃಖ ಸಂವೃತ
ತಾಳು ಭಾರತ
ಮೋಹ ವಿಸ್ಮೃತ
ಏಳು ಭಾರತ
ಪ್ರಗತಿ ಸುವ್ರತ
ಬಾಳು ಅಮೃತ!
ರಘುಪತಿ ರಾಘವ ರಾಜಾರಾಮ
ಪತಿತ ಪಾವನ ಸೀತಾರಾಮ!

---

# ಭೂಮಿತಾಯಿಗೆ!

ರಸದ ಕಡಲೊಡಲೊಳಗೆ ಕುದಿಯುತಿದ್ದರು ತಾಯೆ
ಕೊನೆಯ ದಿಹ ಮೌನದಲಿ ಮಲಗಿರುವೆ. ಎನಿತು ಶುಭ-
ಯೋಗವದು ? ಯಾವುದೋ ಸ್ಫೂರ್ತಿಮಾರುತ ಮೂರ್ತಿ
ಮನದ ಮೊಗ್ಗೆಯ ಬಿರಿದು, ಇಂಗಡಲನೇ ಹರಿಸಿ-
ಯರಳಿಸಿತು ಕಮನೀಯ ಕಾವ್ಯ ಚಂದ್ರಮನನ್ನು
ಹ್ಲಾದೈಕ ಮಯವಾದ ಪುಣ್ಯಕೃತಿ ಜೊನ್ನದಲಿ
ಅಮರ ತಾರಾನಿಕರ ನಿರುತ ಸ್ನಾತ ಪುನೀತ!
ದೋಷಾಕರನ ಗಂಗೆ ಸುರರಿಗೂ ಶುಚಿ ತೀರ್ಥ!

ಅಕಲಂಕ ನಿರ್ದೋಷಕೃತಿ ಜನಿಸೆ, ರಸಹೀರಿ
ನರನಮರನಾಗನೆ ? ನಿನ್ನೆದೆಯಲುರಿಯುತಿಹ
ಸತ್ಯ ಸೂರ್ಯಪ್ರಖರ ಹಿಮವತಿಯ ಶಿಖರನೀ-
ಹಾರವನು ತೊಡೆದು ದೊರೆವಾಡ ಹೊನಲನೆ ಹರಿಸಿ
ಅಳಿಯುತಿಹ ಪ್ರಾಣಗಳನೆಂದು ಸಂಜೀವಿಪುದು ?
ಮತಿಗೆಟ್ಟ ಮಾನವನನೆಂದು ಉದ್ಬೋಧಿಪುದು ?

---

# ಆಸೆ

ಅಮರರಿಗೆ ಮೃತರ ಕಳೆ ಕಾಲನಿಗು ಮುಪ್ಪ ಕಳೆ
ಬಂದರೂ ನೀನಿರುವೆ ಚಿರಯೌವನೆ
ಚಿಂತೆಗಳ ಸಂತೆಯನೆ ಚಿತೆಯ ಮೇಲಿರಿಸುತ್ತ
ಎದೆಯೆದೆಯ ಚಿಗುರಿಸುವ ಚಿರನೂತನೆ!

ಬಾಳುವೆಯ ಜಟಿಲತೆಯು ಬಂಧುಗಳ ಕುಟಿಲತೆಯು
ಮನದ ಸಿಹಿಯನು ಹಿಸುಕಿ ಬಳಲಿಸಿರಲು
ಮಿಣುಕುಹುಳದೆಳನಗೆಯನೆದೆಯಗೂಡಲಿ ಬೆಳಗಿ
ಹೆಣವಾದ ಹರಣಗಳನುಜ್ಜೀವಿಪೆ!

ಯಾತನೆಯ ಯಾಮಿನಿಯಲಮರತಾರೆ!
ನಿಟ್ಟುಸಿರುಮನೆಯೊಳಗೆ ಬೆಳಗು ಬಾರೆ,
ಕಹಿ ಬಸಿರಿಗೂ ನಿನ್ನ ಸುಧೆಯ ತಾರೆ
ನಿನ್ನವೊಲು ಅಭಯವನು ನೀಡಲಿಹರೆ?

---

# ಸೋತವನ ಹಾಡು

ಕಟ್ಟಿರಲು ಮಾನವನ ಹಣೆಗೆ ಮುಳ್ಳಿನ ಮುಕುಟ
ತಣಿವ ತಂಪನು ಮನದಿ ತಳೆಯಬಹುದೆ ?
ಕಲಮಲನೆ ಸಿಡಿದುರಿದು ಬೆಂಕಿಬಳ್ಳಿಯು ಹರಡೆ
ಒಡಲಲ್ಲಿ ಶಾಂತಿಯದು ಅರಳಬಹುದೆ ?
ಅಳಿದಿರುವ 'ನಿನ್ನೆ'ಗಳ ಹೆಣಗಳನು ಹೊತ್ತಿಹೆವು
'ಇಂದು'ಗಳಿಗಾಳಾಗಿ ದುಡಿಯುತಿಹೆವು
ಮುಂದಿರುವ 'ನಾಳೆ'ಗಳ ನೆಳಲಲ್ಲಿ ಚಿಂತೆಗಳ
ಚಿಗುರಿಸುತ ಎದೆಗುದಿಯ ಬೆಳೆಸುತಿಹೆವು.

ಸಾಕಾಯ್ತು ಬಾಳುವೆಯು ಕುರುಡು ಕಾಮನೆಯಾಟ
ಅನ್ಯಾಯ ಮೋಸಗಳ ಮೋಹದಾಟ
ನುಗ್ಗಿಬಹ ತೆರೆಗಳೇರಾಟ ಕಾಟದಿ ನನ್ನ
ಅಂಗಾಂಗವಾಯಾಸ ವಿದ್ಧವಕಟ
ಬೇಡಿದೆನೆ ಬಾನಿನಲಿ ಬೆಳೆವ ಅಮೃತದ ಹನಿಯ
ದೇವತೆಯ ವೈಭವವ ಕಾಮಿಸಿದೆನೆ ?
ಹುಲುಮನುಜನೆದೆಯೊಳಿಹ ಕಿರಿಯಾಸೆಗೂ ದೈವ
ಮುಚ್ಚಿರುವ ಬಾಗಿಲವ ತೆರೆಯಿತೇನೆ ?

ಕೆರಳಿರುವ ಬಾಳ್ಗಡಲ ತೊರೆದು ಬಾ ನೀರೆಯೆ
ಏರಿಳಿತವಿಲ್ಲದೀಯುಸುಕಿನಲ್ಲಿ

ಧರ್ಮಬಂಧನ ಜರೆದು ಕರ್ಮಕ್ರಂದನ ತೊರೆದು
   ಕೊರಳ ಕೊಯ್ಯುವ ಬಾಳನೊಗವ ಹರಿದು
ಸಿಕತಸೀಮೆಯ ಸೌಮ್ಯ ಶಾಂತಿಯಲಿ ಇಲ್ಲಿ ಬಾ
   ಆಯಾಸವಾರಿಸುವ ವಿಶ್ರಾಂತಿಗೆ
ಕನಸಿನಾರಾಮದಲಿ ಕೊನರಬಹುದೆಲೆ ತಣಿವು
   ಮರೆಯಬಹುದೆಲೆ ಮಲೆತ ವ್ಯಥೆಯಮೊನೆಯು

ಕಡಲತ್ತ ತನ್ನೆದೆಯ ಕದಡಿಸಿದ ಚಂದಿರನ
   ಮುಕ್ಕಲಿಕೆ ನಾಲಗೆಯ ಚಾಚುತಿರಲಿ
ಕಾಲ್ಕೆಳಗೆ ಸುಳಿಯುತಿಹ ಶೇಷನನು ಕುಕ್ಕಲಿಕೆ
   ಪಾತಾಳವನು ಅಗಿದು ಮೊರೆಯುತಿರಲಿ
ಇಲ್ಲಿ ಕಾಣುವುದೇನು ?—ನೀರ್‌ನೊರೆಯ ಬಿಳಿಗೆರೆಯೆ
   ಕಡಲ ಮೊಳಗೂ ಕೂಡ ಕಿವಿಯ ಪುಗದು.
ಇಲ್ಲಿ ಗಾಳಿಯು ಕೂಡ ದಣಿದು ಗರಿಗಳ ಮುಗಿದು
   ಹೂವಿನುಯ್ಯಲೆಯಲ್ಲಿ ಮಲಗಿರುವುದು.

ರಿಕ್ತವಹ ಸಂತಾಪ ಪರಿತಾಪಗಳ ತೊರೆದು
   ಸೌಮ್ಯಸುಪ್ತಿಯಲೆದೆಯು ಮಿಡಿಯುತಿರಲಿ
ಇಲ್ಲಿರುವ ಗಿರಿಗಳಲಿ, ಹರಿಯುತಿಹ ಹೊಳೆಗಳಲಿ
   ಹಸಿರಿನಲಿ ಬಿತ್ತರದ ಉಸುಕಿನಲ್ಲಿ
ಅಕ್ಷಯ್ಯ ಶಾಂತಿಯದು ನೆಲೆಸಿರಲು ನಾವೇಕೆ
   ವ್ಯರ್ಥವಾದೆಣಿಕೆಯಲಿ ನವೆಯಬೇಕು ?
ಕನಸಿನಲಿ ಕಣ್ತೆರೆದು ನಸುಕಿನಲಿ ನಸುಬೆಳೆದು
   ಅರಳಿಯುಳಿವಲರಿನಾ ಬಾಳೆ ಸಾಕು !

ಮುಳುಗಲಿಹ ನೇಸರನು, ಮೂಡಲಿಹ ಚಂದಿರನು
ಮರೆಯುತಿಹರಾಗಸದ ಅಂಚುಗಳಲಿ
ಕ್ಷಣಕಾಲ ಮರೆತಿಹರು ರೇಗಿಸುವ ಕದನವನು
ಶಾಂತಿಯಾ ಕಾಂತಿಯನೆ ಕರೆಯುತಿಹರು.
ಗೆಳತಿ, ವೀಣೆಯಮೇಲೆ ತಂತಿ ನೋಯುವೊಲಿನ್ನು
ಮೆಲ್ಪೆಲರಿಗೂ ಮಿದುವು ಬೆರಳಾಡಲಿ
ಗಾಳಿಗೂ ತಿಳಿಯದೊಲು ಮೌನವೂ ಮುರಿಯದೊಲು
ಗೀತಗಳು ಕಿವಿಯಲ್ಲಿ ಮೆಲ್ಲುಲಿಯಲಿ !

ಹುಸಿಯಾಸೆಗಳ ಪಾಶ, ಕೃತಿ ವಿರಸದಾಯಾಸ
ಮಾಯವಾಗುವುವೆಲ್ಲ ಸುಪ್ತಿಯಲ್ಲಿ
ಮಲೆತು ಮುರಿಯುವುದೇನು ? ಅಲೆದು ಅರಸುವುದೇನು ?
ಬಾಳೆಲ್ಲ ಸುಖಪಡೆಯೆ ವಿರತಿಯಲ್ಲಿ
ಸುಪ್ತಿಯೇ ಜೀವನದ ಸುಖ ಪೂರ್ಣ ಭುಕ್ತಿ
ಭಾವಗಳ ರಾಗಗಳ ಕೊನೆಯ ತೃಪ್ತಿ
ಪ್ರಕ್ಷುಬ್ಧ ಜಲಧಿಯಾ ಜಲವೆ ಶಿಲೆಯಾಗಿರುವ
ಹಿಮವತಿಯ ಸಿದ್ಧಿಯೂ ದೀರ್ಘ ಸುಪ್ತಿ.

ಸುಪ್ತಿ ಶುಕ್ತಿಯ ಸೇರೆ ಮನವು ಮೌಕ್ತಿಕವಾಗಿ
ಪಡೆಯಬಹುದೆಲೆ, ನಲ್ಲೆ, ನಿತ್ಯ ಮುಕ್ತಿ !

---

# ಉನ್ಮಾದ ಗೀತ

ಹೃದಯದೊಳಗುನ್ಮಾದ ತುಂಬಿದೆ ಕಾಲಿನೊಳಗುರಿಯೆದ್ದಿದೆ
ಮರಣ ಮೂರ್ಛಿತ ಮನವು ಹರಣದ ಬಲಿತ ಗರಿಗಳ ಪಡೆದಿದೆ

ಕಟ್ಟುಗಳ ಕಿರಿಗೂಡಗೋರಿಯ ಮುರಿದು ಮೇಲಕೆ ನೆಗೆಯುವೆ
ಇನ್ನು ನಿಲ್ಲೆನು ನಾನು ಇಲ್ಲಿಗೆ ಬಾನಿನಂಚನೆ ಮುಟ್ಟುವೆ

ಯಾರು ತಡೆವರು ನನ್ನನು? ಯಾರು ಕಟ್ಟುವರೆನ್ನನು?
ಕಿರಣಗಳು ಕೊರೆದಿರುವ ದಾರಿಯ ಹಿಡಿದು ನಾ ಮುನ್ನಡೆವೆನು.

ನೂರು ಜನುಮದ ನೋವದಿಂದಿಗೆ ಮನಕೆ ಕಾವನು ಕೊಟ್ಟಿದೆ
ನೂರು ಬಾಳಿನ ಬೇವದೀಗಳೆ ಎದೆಗೆ ಕಸುವನ್ನೂಡಿದೆ.

ನೋಡುಮನದಲಿ ಬೇಗೆ ಎದ್ದಿದೆ, ಕುಣಿವ ಕಡಲೇವೊಳಗಿದೆ
ಸಾವ ಭಯವನು ಬಿಟ್ಟಿದೆ, ವೀರರೋಜವ ತೊಟ್ಟಿದೆ

ಸಪ್ತಸಾಗರ ದಾಟುವಾ ಗೌರಿಶಂಕರ ಮೆಟ್ಟುವಾ
ಕೊವಲು ದಿಟ್ಟಿಯು ತಟ್ಟಿದಾಕಿರುಚಿಕ್ಕೆನಾಡನು ಮುಟ್ಟುವಾ

ಬಯಕೆ ಬಲಿತಿರೆ ನಿಲ್ಲಬಹುದೆ ನಿಂತ ನೆಲವನು ನಂಬುತ
ತಡೆಯಬಹುದೆ ಸಂದ ದುಃಖದ ಇರಿತವನ್ನೇ ನೆನೆಯುತ

ಜನದ ಸಂದಣಿ ತೊರೆವೆನು, ಜಗದ ಗದ್ದಲ ಮರೆವೆನು
ಬಾನ ಹೊಳೆಯಲಿ ತೇಲಲೆನ್ನಯ ಕಿರಿಯ ನಾವೆಯ ಬಿಡುವೆನು.

ಇರುಳು ಕಳೆಯಲಿ ಹಗಲು ಅಳಿಯಲಿ ಕಾಲಜಾರಲಿ ಸವೆಯುತ
ಕಾಣದಂತಹದನ್ನೆ ಅರಸುವೆ ಕಾಲನನ್ನೇ ಮೆಟ್ಟುತ.

ಅಳಿವ ಗಳಿಗೆಗಳಿಂದಲೂ ಎಳೆಯುವೆನು ಅಮರರ ಸಿರಿಯನು
ಬೆಳೆದು ಮುಟ್ಟುವೆ ಮುಗಿಲಿನೇರನು ಬಯಸಿ ನಾಕದ ನೆರೆಯನು

ಆದರ ಕರೆಯೇ ತಲೆಯ ಕೆಣಕಿದೆ ಹೃದಯ ಗುಹೆಯನು ತುಂಬಿದೆ
ಒಡಲಿನಲಿ ದಳ್ಳುರಿಯ ಬಳ್ಳಿಯ ಹರಡಿ ನನ್ನನು ನೋಂತಿದೆ.

———

# ಸ್ನೇಹ-ಸಿಂಧು

ದೇವ ಹೃದಯದ ನೀಲದಾಳದಿ
ಮೊರೆವ ಸ್ನೇಹದ ಸಿಂಧುವೆ!
ಬೆಂದ ಬಾಳಿಗೆ ನೊಂದ ಜೀವಿಗೆ
ನೀನೆ ಸರುವರ ಬಂಧುವೆ!

ಇಳೆಯ ಕುದಿಯನು ಕಳೆಯಲೋಸುಗ
ಹಸಿರ ಸಿರಿಯನು ಹೊದಿಸಿದೆ
ಏಳು ಕಡಲುಗಳನ್ನೆ ಹರಯಿಸಿ
ಪ್ರಾಣಪವನವ ಸುತ್ತಿದೆ.
ಹಗಲಿನುರಿ ನಂದಿಸಲು ಸಂಧ್ಯಾ-
ಮೋಹ ಕಂಕಣ ಕಟ್ಟಿದೆ
ಇರುಳಿನೆದೆಯಲಿ ಚೆಲುವ ಚಂದ್ರನ
ಬಿಂಬವನ್ನೇ ಬಿತ್ತಿದೆ.

ಸೂರ್ಯ ಲೋಕದ ಸುತ್ತು ಭ್ರಮಿಸುವ
ನಿಖಿಲ ಗ್ರಹಗಳ ರತಿಯಲಿ
ಕಾಲಚಕ್ರದ ವಕ್ರಗತಿಯಲಿ
ಜನ್ಮ ಮರಣದ ಜೊತೆಯಲಿ
ದಿವ್ಯ ಪ್ರೀತಿಯ ಭವ್ಯ ಗೀತವ
ಮಿಡಿದು ವಿಶ್ವವ ತುಂಬಿದೆ

ಪಂಚ ಭೂತಗಳನ್ನು ಬೆರೆಯಿಸಿ
ಬಣ್ಣದಾಟವ ನಾಡಿದೆ

ಚೆಲುವಿನಲಿ ಸೆಳೆ ಅಳಲಿನಲಿಯು-
ಕ್ಕರತೆ ನೆಲದಲಿ ಕಂಪನು
ಆಸೆಗನಸುಗಳರಳ ಹೃದಯದಿ
ಬೆಳೆದೆ ಇಹದಲಿ ಸಿರಿಯನು
ನಿನ್ನ ತೆರೆಗಳು ತಟ್ಟಿದೆಡೆಯಲಿ
ಸ್ವರ್ಗಲೋಕವು ಬೆಳೆವುದು
ನಿನ್ನ ಮೊಳಗೂ ಕೇಳದಾಕಡೆ
ನರಕಕಲ್ಲವೆ ನೆಲೆಯುದು.

ನಿನ್ನ ದಂಡೆಯ ಉಸುಕಿನಿಂದಲೆ
ಗುಬ್ಬಿ ಗೂಡನು ಕಟ್ಟುತ
ಆಟವಾಡುತ ಮರೆತ ಕೆಲವರ
ಕರೆವೆ ತೆರೆ ಬೆರಳೆತ್ತುತ
ಕಣ್ಣ ಮಿಂಚಿನ ಬಲೆಯ ಬೀಸುತ
ಸೆಳೆವೆ ನಿನ್ನೆಡೆ ಹಲವರ.
ಸ್ವಪ್ನಸುಂದರ ಮಾಯೆಯಾಮಿಷ
ಹರಡಿ ನೀ ಸ್ನೇಹಾಕರ

ನೀ ಕೃಪಾಕರನೆಂದು ನಿನ್ನಡಿ
ಗೆರಗಿದವರನು ಮುರಿಯುವೆ
ನೀ ಕೃಪಾಣದ ಕೈಯನೆತ್ತುತ
ರುದ್ರರೂಪವ ತೋರುವೆ

ಯಾವ ಸಾಸಿಗ ನಿನ್ನ ನೀರೊಳು
ಧುಮುಕಿ ಸಿರಿಯನು ಜರೆವನು
ನಿನ್ನದೊಂದೇ ಹನಿಯನಾಶಿಸಿ
ಶಾಂತಿ ಸುಖವನು ತೊರೆವನು.

ನಿನ್ನ ಕರೆಯನು ಕೇಳಿದವರಿಗೆ
ಎಲ್ಲಿ ಬಿಡುಗಡೆ ಇರುವುದು
ನಿನ್ನ ಸುಡುವುರಿ ಮಡಲಿನಲಿ
ಒಡಲೆಲ್ಲಿ ತಂಪನು ಪಡೆವುದು.
ನಿನ್ನ ಮಡಿಲಲಿ ಆಡ ಬಂದೆನು
ಲೀಲೆಯಲಿ ಕುಣಿದಾಡಲು
ತಿಳಿಯದೆಯೆ ನಾ ಬೆಂದು ಹೋದೆನು
ಕನಸಿನಾಳಿಕೆ ಮುಗಿಯಲು

ನನ್ನ ಆಸೆಯ ಭವ್ಯ ಮಂದಿರ
ಶೂನ್ಯದಲಿ ಮರೆಯಾಯಿತು
ಮನದ ಬಾಂದಳದಲ್ಲಿ ಮಿನುಗಿದ
ಚಂದ್ರ ದೀಪವು ಆರಿತು.
ರಮ್ಯ ಭಾವದ ಸುಮನ ಪಲ್ಲವ
ಬಾಡಿ ಎದೆ ಕೊರಡಾಯಿತು
ಪಾರಿಜಾತದ ಮೃದುಲ ಹಾಸುಗೆ
ಶರಗಳಾಸನವಾಯಿತು.

ಸ್ವಪ್ನ ಸುಂದರವಾದ ಸುಖಮಯ
ಸುಲಭ ಜೀವನ ಮುಗಿಯಿತು

ನಿಜದ ಕಲ್ಲೆದೆ ಕೊರೆದು ಹರಿಯುವ
ಸತ್ವ ಸಮಯವು ಬಂದಿತು.
ನಿನ್ನ ಆಸರೆಯಲ್ಲಿ ನಿಂದಿಹ
ಬಾಳ ಬಗೆಯನು ಅರಿತೆನು
ಮುರಿವ ಕೈಯೇ ಅಭಯ ಕರವೆಂ-
ಬುದರ ಪರಿಯನು ತಿಳಿದೆನು.

ಬೆನ್ಗೆ ನಿನ್ನಯ ಭೀಮರಕ್ಷೆಯ
ಕಟ್ಟಿಕೊಂಡಿಹ ಧೀರರು
ಶಿಲುಬೆಯನು ನಗುನಗುತಲೇ-
ರಿದರತುಲ ತ್ಯಾಗದ ವೀರರು.
ನಂಜುನುಂಗಿದ ಒಡಲಿಗಿಳಿಯಿತು
ಅಮೃತ ಸತ್ವದ ಶಾಂತಿಯು
ಉರಿಗೆ ಧುಮುಕಿದರೇನು ದೊರೆಯಿತು
ಚಂದ್ರಶೀತಲ ಪ್ರೀತಿಯು

ಆದರೆನ್ನೆದೆಯಲ್ಲಿ ಭೀತಿಯು
ನೆರಳ ಚಾಚುತಲಿರುವುದು
ಕಣ್ಗೆ ಮಂಕನು ಕವಿದು ಹೃದಯದ
ಕಸುವ ಕೀಳುತಲಿರುವುದು.
ಏತಕಿನ್ನೂ ಹೃದಯ ತಳದಲಿ
ಹಗೆಯ ಹಾವವಿತಿರುವುದು
ಹೆಡೆಯ ಹರಡುತ ಬಾಳಿನಲಿ ನಂ-
ಜೇಕೆ ಚಿಮ್ಮುತಲಿರುವುದು.

ಹೃದಯವೆಲ್ಲಾ ನಿನ್ನ ಕರುಣೆಯ
ಕಿರಣಕಾಶಿಸಿ ಕಾಯ್ದಿದೆ
ಯಾವ ದೈವವು ನಮ್ಮ ಮಧ್ಯದಿ
ಮೋಘ ಜವನಿಕೆಯೆಳೆದಿದೆ.
ಯಾರು ಕೆಡುಕಿನ ಬೀಜ ಗಾಳಿಗೆ
ತೂರಿ ಎಲ್ಲೆಡೆ ಬೆಳೆವರು
ಹಗೆಯ ಕಾಡಿನ ವಿಷದ ವಲಯವ
ನಾಡು ಬೀಡಿಗೆ ಬಿಗಿದರು.

ದಿನವು ಚಿಮ್ಮುವ ಕೊಲೆಯ ರಕ್ತವು
ಹೇಗೆ ನನ್ನೆದೆ ತಟ್ಟಿತು
ಜಗದ ಪಾಪದ ಭೂತ ನೃತ್ಯವು
ಮನದ ರಂಗಕ್ಕಿಳಿಯಿತು.
ಯಾರ ಕರ್ಮವು ಬೆಳೆದ ಕಟುಫಲ
ನನ್ನ ಬಾಯಲಿ ಬಿದ್ದಿತು
ಅದರ ಕಹಿ ಯೊಡಲನ್ನು ತುಂಬಿರೆ
ಹರಣ ಕಸಿವಿಸಿ ಗೊಂಡಿತು.

ಯಾರು ಈ ಕಹಿ ಕಳೆವರೆನ್ನಯ
ಕೊಳೆಯನ್ನೆಲ್ಲಾ ತೊಳೆವರು
ಲೋಕವೆಲ್ಲಾ ತುಂಬಿ ಉಳಿದಿಹ
ಪಾಪವನು ಉರಿಗಿಡುವರು
ಪಾಪನಾಶನ ಗಂಗೆಯಲಿ ಇ-
ಕ್ಕೆಲದಿ ಕೊಳೆಯೋ ತುಂಬಿದೆ

ಸಪ್ತಸಾಗರದಂತರಂಗದಿ
ಕೊಲೆಯ ಜಾಲವು ಹರಡಿದೆ.

ಇನ್ನು ನೀನೇ ಶರಣು ಪತಿತಗೆ
ಯಾರು ಎತ್ತುವರನ್ಯರು
ನಿನ್ನ ಕರೆಯನು ಕೇಳಿ ನಿನ್ನೆಡೆ
ಓಡಿಬರುವರೆ ಧನ್ಯರು
ಏಳು ಸ್ನೇಹವೆ ಅರಳು ನಂದಾ-
ದೀಪವಾಗೆನ್ನೆದೆಯಲಿ
ನಿನ್ನ ಸಾಗರ ಘೋಷವೇಳಲಿ
ನನ್ನ ತನುಮನ ಕೆಣಕಲಿ.

ಕ್ಲೈಬ್ಯ ತೊಲಗಲಿ ಭೀತಿಯೋಡಲಿ
ಕೀಳು ಎಣಿಕೆಗಳಳಿಯಲಿ
ನಿನ್ನ ನಂಬಿದ ನನ್ನ ನೌಕೆಯು
ನಿನ್ನ ನೀರಲಿ ಧುಮುಕಲಿ
ಮತ್ತೆ ಬೇರೆಡೆ ಸುಖದ ಜೀವನ
ದೊರೆತರೂ ನಾನೊಲ್ಲೆನು
ಇಲ್ಲಿ ನಿನ್ನೆಡೆಯಲ್ಲಿ ಸಾವಿನ
ಸಖ್ಯ ಬೆಳೆಸಲು ಸಿದ್ಧನು.

ನಿನ್ನ ಸ್ಪರ್ಶವು ರೋಮ ರೋಮದಿ
ಸ್ನೇಹವಲ್ಲಿಯ ಚಿಗಿಸಲಿ
ನಿನ್ನ ಕರುಣಾ ದೃಷ್ಟಿ ಹೃದಯದ
ಅಮೃತ ಸೃಷ್ಟಿಯ ತೆರೆಯಲಿ

ದಿಗ್‌ದಿಗಂತದಿ ಮುತ್ತು ಹವಳದ
ವರ್ಣ ಸಂಪದ ಬೆಳೆಯಲಿ
ಬಾನು ನೆಲದಲಿ ಹರ್ಷಧವಲತೆ
ಜೊನ್ನದೊಲು ತುಳುಕಾಡಲಿ

ಸ್ನೇಹ ಸಿಂಧುವೆ, ನಿನ್ನ ಸ್ನೇಹಲ
ಲಹರಿಯಲಿ ಮುಳುಗೇಳಲು
ಶುದ್ಧ ಪಾವನ ತ್ಯಾಗ ಜೀವನ
ಸತ್ವವನು ಸವಿದೇಳಲು
ನನ್ನ ಬಾಳಿನ ಭಾವ ಬಳ್ಳಿಗೆ
ಆಶೆಯೊಂದೇ ಕೊನರಿದೆ
ನಿನ್ನನೊಳ ಹೊರಗೆಲ್ಲ ಕಡೆಗೂ
ತುಂಬಿಕೊಳ್ಳಲು ಎಳಸಿದೆ.

---

# ಪ್ರಣಯಗುರು

ಗೋಳನಂಜಿನ ಗಾಳಿ ಬೀಸೆ, ಬಾಳಿನಬಳ್ಳಿ,
ಮುರುಟಿರಲು ಗಾಸಿಗೊಂಡು
ಶಾಪದೊಲು ಚಂಡಾಶು ಶಾಂತಿಯನ್ನೇ ತಳ್ಳಿ
ತಾಂಡವವ ನಾಡಿತಂದು
ಆಸೆಗಳು ಕನಸುಗಳು ಮನದೆಲ್ಲ ಉಸಿರುಗಳು
ಹಳಿತು ಕೊಳೆ ಕಹಿಯಾದವು
ಬಾಳ ಬೆಳಿಸಲು ಬಗೆದ ಭಾವಗಳು ರಾಗಗಳು
ಇರಿವ ಕೂರಲಗಾದವು.

ನನ್ನ ತಾಯ್ನೆಲೆಯಾದ ನೆಲವು ಕಲ್ಲಾಗಿತ್ತು
ಕಸವೆ ನನಗಾಯಿತನ್ನ
ಕೂಸು ಬಾಯ್ದೆರೆದಾಗ ತಾಯ ಮೊಲೆ ಮುಚ್ಚಿತ್ತು
ಅದಕಿಹುದೆ ಮಿಗಿಲು ಬನ್ನ
ಬೇರಿಳಿಸಿ ಅರಸಿದರು ನೀರ ಸುಳಿವೇ ಇಲ್ಲ.
ಕಂಬನಿಯೊಳಾಂತೆ ತಣಿವು
ನಭಕೆತ್ತಿ ಕೈಚಾಚಿ ಕರುಣೆ ಕೇಳಿದರಿಲ್ಲ
ಇನಿಸಾದರಲ್ಲಿ ಒಲವು.

ಎಲೆಯೆಲ್ಲ ಉದುರಿದವು ನಲಿವೆಲ್ಲ ಚದರಿದವು
ನಿಂತೆ ನಾ ಕೊರಡಿನಂತೆ

ಸ್ಮೃತಿಯ ವಿಕೃತ ಛಾಯೆಗಳು ಸುತ್ತಿಕೊಂಡವು
ನನ್ನನ್ನು ಗೋರಿಯಂತೆ
ಇರುಳ ಕರಿಯೆದೆ ಯರಳಿ ಇನಬಿಂಬ ಬೆಳಗಿದೊಲು
ನನ್ನ ಬಾಳ್ ಬಾನಿನಲ್ಲಿ
ಇನಿಯಳೇ ನಿನ್ನೊಲವು ಮೂಡೆ ತೊಳಗಿತು ಮನವು
ಹೂಬಿಸಿಲ ಜೇನಿನಲ್ಲಿ

ನನ್ನೆದೆಯ ಹೊದರಲ್ಲಿ ಹರುಷ ಹಕ್ಕಿಯ ಹಿಂಡು
ಹೊಮ್ಮಿಸಿತು ಹಾಡು ಹೊಳೆಯ
ಮಧುಮಾಸ ಮುದಮಾಸ ಬಂದಿರುವ ತೆರದಲ್ಲಿ
ಚಿಮ್ಮಿಸಿತು ಹಸಿರ ಬೆಳೆಯ
ಪುಣ್ಯಪಾವನ ಗಂಗೆ ಶುದ್ಧ ಪ್ರೀತಿ ತರಂಗೆ
ಹರಿದೆ ನೀ ಮಸಣದಲ್ಲಿ
ಕಸವ ರಸವಾಗಿಸಿದೆ ವಿಷವ ಸೊದೆಯಾಗಿಸಿದೆ
ಸೇರಿ ಈ ಹೃದಯುದಲ್ಲಿ

ಪತಿತಪಾವನ ಮೂರ್ತಿ ನನ್ನ ಜೀವನ ಸ್ಫೂರ್ತಿ
ಪ್ರೀತಿಯೇ ಸತ್ಯ ನಿಜವು.
ಪ್ರೀತಿಯೊಂದೇ ತಥ್ಯ ಉಳಿದುದೆಲ್ಲಾ ಮಿಥ್ಯ
ಅದರ ರೀತಿಯೆ ನೀತಿಯು
ಎಂದು ಕಲಿಸಿದ ಗುರುವೆ ನನ್ನ ಬಾಳಿನ ಗುರಿಯೆ
ನಮಿಸುವೆನು ನಾನು ನಿನಗೆ
ಪರದ ಪರತತ್ವವನು ಇಹದ ಸುಖ ಸತ್ವವನು
ನೀಡಿರಲು ನೀನು ನನಗೆ !

---

# ಇರುಳು-ಕಳೆಯಿತು

ಇರುಳು ಕಳೆಯಿತು, ಬೆಳಕು ಬೆಳೆಯಿತು,
ನೋಡು ಮೂಡಣ ದಿಕ್ಕಿಗೆ
ಮನದ ಕ್ಲೇಶದ ಲೇಶ ಕಳೆಯಿತು
ಮತ್ತೆ ಹೊಮ್ಮಿತು ನಂಬಿಗೆ!
ಚೆಲುವ ಬೆಳಕಿನ ಹವಳದುಟಿಯದೊ
ಬಾನಿನಂಚನು ತಟ್ಟಿತು
ಕೆಂಪು ಕೊನರಿತು ಚಿಮ್ಮಿ ಹರಿಯಿತು
ದಿಗ್ ದಿಗಂತವ ತುಂಬಿತು.

ನೂರು ನಾಲಗೆಯಿಂದ ಗಾಳಿಯು
ಪ್ರೀತಿ ಗೀತವ ಹಾಡಿತು.
ಹೂವಿನೆದೆಯನು ತೆರೆಯುತೊಲವಿನ
ಸವಿಯನದರಲಿ ಬಿತ್ತಿತು.
ಮಂಜು ಹರಿಯಿತು, ಕಣ್ಣು ತಣಿಸುವ
ಬೆಳಕು ಎಲ್ಲೆಡೆ ತುಂಬಿತು
ಅಳಲು ಬತ್ತಿತು ಹರುಷವುಕ್ಕಿತು
ಮಮತೆ ಮನದಲಿ ಹೂತಿತು!

———

# ಸಂಜೆಗೆ

(ಒಂದು ಪ್ರಗಾಥ)

ಹೃದಯ ಕಂಪಿಸುತಿಹುದು ಆನಂದ ದೂರ್ಮಿಯಲಿ
ತುಂಬಿ ವ್ಯೈಮನವನ್ನು ಬಧಿರಿಸಿಹುದು
ಇಹುದೆ ಇಂತಹ ಚೆಲುವು ಲೋಕದಲಿ ನಾಕದಲಿ
ನಿನ್ನವೊಲು, ಶ್ಯಾಮಲೆಯೆ, ಮಾಗಿದೊಲವು
ಹರಣಗಳ ನಯನದಲಿ ಅರಳಿಸುತ ನೋಡುವೆನು.
ಕಡಲನ್ನೆ ಕುಡಿಯುವೊಲು ದಿಟ್ಟಿಸುವೆನು.
ಹಗಲಿರುಳು ತೆರೆ ಸರಿಸಿ ಬಂದೆ ಮಂಥರೆ, ಮಧುರೆ
ನಿಮಿಷಾರ್ಧವೇ ನಿಂತು ನಡುವೆ ಮರೆಗೆ
ಆದರೆಲ್ಲೆಡೆ ನೀನು ಮಂತ್ರ ಮೌಕ್ತಿಕ ಜಲವ
ತೂರುತಿರೆ ದೇಶ ದಿಶೆ ಹೂ ಹಾಸಿಗೆ.
ಜರೆಯ ಮರೆಯಿತು ಗಿರಿಯು ಹರೆಯತಳೆದಿತು ತಿರೆಯು
ನನ್ನ ಕರಳೂ ಅರಳಿ ಗಮಗಮಿಸಿತು.
ಸ್ವರ್ಗಲೋಕದ ಮಾರ್ಗ ದುರ್ಗಮವೆ ಈ ಕ್ಷಣದಿ
ನಾಕವೇ ನಗುತಿರಲು ನಿನ್ನಡಿಯಲಿ
ಚೆಲುವಿನಾ ಬಲೆಯಾಗಿ ಒಲವಿನಾ ಸೆಲೆಯಾಗಿ
ಮಣ್ಣಿಗೂ ಬಣ್ಣನೆಯ ಲೀಲೆ ದೋರೆ
ನೆಲದಿ ನೆಲೆಯಾಗಿರುವ ನನ್ನ ನನ್ನಿಗಳೆಲ್ಲ
ನಿನ್ನ ತೇಜೋರಥದಿ ಸಾಗುತಿಹವು.
ಬಲ್ಲೆಯಾ ನನ್ನೆದೆಯ ಏಕತಾರಿಯ ಮೇಲೆ
ಆಸೆಮಿಡಿಯುವ ಭಗ್ನ ಗೀತಗಳನು
ಮನದ ಮಂಗಲವನ್ನು ಮೃತಿಗೊಳಿಸಿ ಜೀವನದ

ಹಸಿವೆಯನೆ ಬತ್ತಿಸುವ ರಾಗಗಳನು.

ಚೆಲುವಾಗಿ ಚಣವರಳಿ ಅಳಿದ ನನ್ನೊಲವಿನಲಿ

ನೆನಹು ನೋವಿಗೆ ನೀರನುಣಿಸುತಿಹುದು.

ಬಾನ್ನೆಲದ ಬೇಟಕ್ಕೆ ಬೆಳೆದ ಸಂಧ್ಯಾ ಕುವರಿ

ದಿನದಗ್ನಿತಪ ಹೂತ ಪುಣ್ಯ ನೀನು

ನೋವು ನನೆಕೊನೆಯೇರಿ ನಲಿವಾಯಿತೆನ್ನುವೊಲು

ಬಾಂಬಸಿರ ಕಿಚ್ಚಿನಿಂದೆದ್ದೆ ನೀನು.

ಪಡುವಣದ ಮಡುವಿನಲಿ ನೂರೆಸಳನ್ಯೆದಿಲೆಯು

ಅರಳಿದೊಲು ಹರಿಸಿರುವೆ ಕಾಂತಿಯನ್ನು

ಸಾಂಧ್ಯ ಸುಂದರಿ ನಿನ್ನ ಸೊಬಗಿನಾರಾಧನೆಗೆ

ನನ್ನ ಮನವೇ ಬಾಗಿ ನಿಂತಿರುವುದು

ಕೋಟಲೆಯ ಕದಡನ್ನು ತಿಳಿದು ಪಾವನವಾಗಿ

ಆತುರದಿ ಕಲ್ಯಾಣ ಬಯಸುತಿಹುದು.

ಸೋತೆದೆಯ ಸರಸಿಯಲಿ ಅರಳಿರುವುದರವಿಂದ

ಶಾಂತಿಯಲಿ ತೋಷವನು ತಳೆದಿರುವುದು.

ಮರೆಯಾದೆಯಾ ದೇವಿ! ಮನವು ಮುಕುಲಿತವಾಯ್ತು

ತಿರೆಯು ಕಣ್ಣಿಂಗಿದೊಲು ಮುಗ್ಗರಿಸಿತು.

ಆದರೂ ನಿಮಿಷದಲಿ ಜೀವನವನರಳಿಸಿದ

ನಿನ್ನ ಪ್ರೀತಿಯ ರೀತಿ ಅನೃತವೆಂತು?

ವಿಲಯ ತಾಳಲಯಕ್ಕೆ ಕುಣಿವ ಬಾಳಿನ ಕತೆಗೆ

ಅಮೃತ ಗೀತದ ರಸವು ತುಂಬಿಬಂತು.

---

# ಅಮೃತ ಕ್ಷಣ

ನಿನ್ನೊಲವಿನಾಳದಲಿ ಮುಳುಗಿ ಮರೆತಿಹೆ ನನ್ನ
ಮನವ ಮುತ್ತಿದ ಮಣ್ಣ ತೊಡರುಗಳ ಕಿತ್ತೊಗೆದು
ನಿನ್ನೊಲವ ಜೊನ್ನದಲಿ ಮಿಂದು ಉನ್ಮದಿಸಿರುವೆ
ಹಿರಿಮೆ ಹೊನ್ನುಗಳಾಸೆ ವಿಫಲವೆನಿಸಿತು ಮನಕೆ
ಸಂತೃಪ್ತ, ಸಂಪನ್ನ, ಪೂತ, ಸ್ವಾಂತಃಪೂರ್ಣ
ನಿದ್ದೆಯೂ ಮರೆಯಿಲ್ಲ, ಎಚ್ಚರದ ಕರೆಯಿಲ್ಲ,
ನಿಷ್ಪಂದ, ನಿಶ್ಶಬ್ದ ಶಾಂತಿಯಲಿ ಸಮಾಧಿಯ
ನ್ನೈದಿಹುದು ಎನ್ನ ಬಗೆ.

ಈ ಕ್ಷಣವು ಭಂಗುರವೆ?
ಆಗಸದ ಆಶಿಷಗಳೆನೆ ತಂಗದಿರ ಸೊದೆ,
ಮನದನ್ನೆ, ಮೈಮನವನರಳಿಸಿದೆ. ಇಂಗಡಲ
ಸವಿಯಲ್ಲಿ ಮೈಮರೆತರೂ ತಾರೆಗಳು ಕಾ-
ಯುತಿವೆಯೆಮ್ಮನ್ನು. ದೇವರಿಗು ಸುಪ್ರೀತ
ವೀಕ್ಷಣವು. ನಕ್ಷತ್ರದೊಲಕ್ಷಯವು ಬಾಳು.

---

# ಎನಿತು ಕಾಲ

ಎನಿತುಕಾಲ ಹುದುಗಿ ಕೊಳೆವುದು
ಎನಿತುಕಾಲ ನೆಲದಲಡಗಿ,
ಕೊಳಚೆಯಾಗಿ ಕಳೆವುದು ?

ಮಳೆಯ ಹನಿಯು ತಟ್ಟಿ ಕರೆದರೂ
ಬೆಳಕ ಕಿರಣ ಇಣಿಕಿ ನಡೆದರೂ
ಮನದ ಆಸೆ ಕೊನರದಿಹುದು
ಕೊಳೆಕೊಳೆವುದು ಕಸದಲಿ

ಹಿರಿಯ ಕನಸ ಕಂಡಿತಾದರೂ
ಚಿಗಿದು ಬೆಳೆಯ ಬಯಸಿತಾದರೂ
ಕಸದ ರಾಶಿ ರಾಶಿ ಬೆಳೆದಿದೆ
ಕೆಳಗೆ ಮನವು ಬಳಲಿದೆ

ನೆಲವ ಸೀಳಿ ಎದ್ದು ಬಾರೆನೆ
ಬಾನನೇರಿ ಚಿಗುರ ಹರಡೆನೆ
ದಿಶೆಯ ತುಂಬ ಹೂವ ತೂರಿ
ಬೆಳಕಿನಲ್ಲಿ ನಲಿಯೆನೆ ?

ಆಸೆ ಬೆಳೆಸಿ ಕೊರಗುತಿರುವೆನು
ಜೀವರಸವ ಹೀರದಿರುವೆನು
ಎನಿತು ಕಾಲ ತಡೆಯಬೇಕು
ದಿವ್ಯ ಬಾಳ ಪಡೆಯಲು ?

---

# ಇರುಳ ದೇವಿ ಬಾ

ಬೇಗ ಬಾ, ಇರುಳ ದೇವಿ ಬಾ, ಬಾ,
ತಡೆಯುದಿರು ಸಿಂಗರಕೆ,
ಬೇಗ ಬಾ, ಬಾ, ಬಾ!

ತಾರೆಗಳ ಲಾಸ್ಯವೇಕೆ
ಚಂದ್ರಿಕೆಯ ಹಾಸ್ಯವೇಕೆ
ಮುಡಿಗೆ ಸಾಕು ಏಳು ಚಿಕ್ಕೆ
ಕಿವಿಗೆ ಎರಡು ಓಲೆ !

ಮೊಗ್ಗಿಗಿನಿಸು ನಗೆಯನಾಯ್ದು
ದಣಿದ ಮನಕೆ ತಣಿವತಂದು
ಬೆಂದ ಬಾಳು ಅರಳುವಂತೆ
ಬೀರು ನಾಳಿನಾಸೆಯ !

ಕನಸಿನ ಮನೆ ಮುರಿದಿದೆ
ಹೃದಯದೊಲುಮೆ ಬತ್ತಿದೆ
ಶುಭ ಶಂಕರ ಮನಕೆ ಮಸಣದ
ಕಳೆದುಂಬಿದೆ ತಾಯಿಯೆ !

ನಿನ್ನ ಮೈಮನ ಸೋಂಕಲಿ
ರೋಮ ರೋಮವು ಕೊನರಲಿ

ಮೃದು ಸುವಾಸ ಮುತ್ತಲಿ
ಹರಣ ಮತ್ತವಾಗಲಿ !

ದಿನದಿ ಸವೆದ ನಲುಮೆ ನಗೆಯು
ನಿನ್ನಿರುಳಲಿ ಚಿಗಿಯಲಿ
ದಿನದಿ ಮುರಿದ ಆಸೆಯೆಲ್ಲ
ನಿನ್ನೆದೆಯಲಿ ಫಲಿಸಲಿ !

ನಿನ್ನ ಕಂಗಳಾಳದಲ್ಲಿ
ಮಂಗಲಮಯ ದೇವನಿರವು
ಅಲ್ಲಿ ನನ್ನ ಒಲವ ನೆಯ್ದು
ನನ್ನ ನಾನೆ ಮರೆವೆನು !

—

# ಪ್ರತೀಕ್ಷೆ

ಯಾರ ದಾರಿಯ ಕಾಯುತಿರುವೆನು
ಯಾರ ಬರವಿಗೆ ನವೆಯುತಿಹೆನೊ? ||ಪ||
ಹೃದಯ ವೀಣೆಯು ಯಾವ ಕೊರಗಿನ
ಚಳಿಯ ಬೆರಳಿಗೆ ನಡುಗುತಿದೆಯೊ? ||ಅ.ಪ.||

ಬೆಳಕು ಬೆಳೆಯಲು ಎದೆಯನರಳಿಸಿ
ಅರುಣ ಕಿರಣದ ಮುದ್ದನಾಶಿಸಿ
ಪಕಳೆ ಮೊಗವನ್ನೆತ್ತಿ ನಿಂತಿಹ
ಹೂವ ಕಾಣಲು, ಯಾರನೋ ಎದೆ
ಬಗೆದು ಬಳಲಿದೆ.... ||೧||

ಕನಸ ದೋಣಿಯನೇರಿ ನಡೆದಿರೆ
ಬಾನ ಬಯಲೇ ಹಿಗ್ಗಿನಾ ತೆರೆ
ಆದರೊಮ್ಮೆಲೆ ಮೌನ ಮುರಿವುದು
ಭಾವ ಜೀವನ ಸೀಳಿ ನೆಗೆವುದು
ಯಾವ ಕರೆಯಿದು ... ||೨||

ಬಾಳ ಸೊಗಸಿನ ಸವಿಯ ಸವಿಯುವೆ
ಮನವ ತಣಿಸುವೆ, ನಲಿಸಲೆಳಸುವೆ
ಎದೆಯ ದುಗುಡವ ಕಳೆಯಬಯಸುವೆ
ಯಾರ ಕೆಳೆತನ ಬಯಸಿ ಬಂದಿದೆ
ಕೊರಗುತಿಹುದೊ.... ||೩||

# ಕಾದಿಹಳು ಭೂದೇವಿ !

ಕಾದಿಹಳು ಭೂದೇವಿ,
ನೀವು ಬಾರಿರಾ !
ದಿವ್ಯ ತೀರ್ಥ ತಾರಿರಾ !

ಬಿಸುಸುಯಿಲ ಬೇಗೆ ಹೊಮ್ಮಿ
ಆಗಸವ ತಟ್ಟಿ ತಿವಿಯೆ
ಹರಣವನೆ ಕೊರಳಲಿರಿಸಿ
ಕರುಣೆಯನು ಕೇಳುತಿಹಳು

ಕ್ಷಣ ಕ್ಷಣವು ನಿಮ್ಮ ನೆನಸು
ಅನುದಿನವು ನಿಮ್ಮ ಕನಸು
ಮರದುದಿಗೆ ಕಣ್ಣನಿರಿಸಿ
ನೋಡುವಳು ಕ್ಷಿತಿಜ ದೆಡೆಗೆ

ನಭವೇರಿ ಕೂಡಿ ಬನ್ನಿ
ನಲವೇರಿ ಕುಣಿದು ಬನ್ನಿ
ಒಡಲೊಲವ ಕರೆದು ತನ್ನಿ
ಮೊಲೆಹಾಲ ಹರಿಸಿ ಬನ್ನಿ

ಹನಿ ಹನಿಯುಲೊಲವು ಬಲವು
ಚೆಲುವಿನಿದು ಇಳಿದು ಬರಲಿ

ಕಣ್ಮಿಂಚ ಕಳೆಯ ಬೆಳೆಯು
ಕುಡಿಯೊಡೆದು ಅರಳಿ ಬರಲಿ

ಹಸಿ ಹಸಿರ ಬೆಳೆಸಿ ನಲಿಸಿ
ಎಳ ನಲುಮೆಗೆಂಪನಿರಿಸಿ
ಎದೆ ಮುಗುಳನರಳಿಸುವುದು
ಹೂ ಗಂಪ ಹರಿಯಿಸುವುದು.

ಸೊದೆಗರೆಯೆ ಉಂಡು ತಣಿದು
ಹೊಸ ಬಾಳ ಪಡೆದು ಬೆಳೆದು
ಹೂಹರುಷ ಹರಡಿ ಕುಣಿದು
ಉನ್ಮದಿಸಿ ನಲಿಯಲೆಂದು
ಆತುರದಿ ಕಾಯುತಿಹಳು !

ಕಾದಿಹಳು ಭೂದೇವಿ
ನೀವು ಬಾರಿರಾ
ದಿವ್ಯ ತೀರ್ಥ ತಾರಿರಾ !

---

# ದೀಪಾವಳಿ

ಬಾನ್ ಬಯಲಲಿ ಚಿಕ್ಕೆಯರಳು
ಮನೆಯಃ ಎದುರು ದೀಪದರಳು
ಆದರಿನ್ನು ಮನದಿ ಇರುಳು
ದುಃಖವಿದ್ಧವೆನ್ನ ಕರುಳು!
ಬಂದೆಯಾ ದೀಪಾವಳಿ!

ತಿರೆಯೊಡಲಲಿ ಪ್ರಳಯ ಭ್ರಾಂತಿ
ಜನದೆದೆಯಲಿ ನಿತ್ಯ ಭೀತಿ
ಬತ್ತಿರುವುದು ಹೃದಯ ಪ್ರೀತಿ
ವ್ಯರ್ಥವಹದು ನಿನ್ನ ದೀಪ್ತಿ
ಬಂದೆಯಾ ದೀಪಾವಳಿ!

ಬೇನೆಗಳೆನಿತೊ ಕೇಸರಿಡಲು
ಬಡತನದಾ ಬೇಗೆ ಸುಡಲು
ಒಡೆತನವಿರೆ ಛಲದ ಒಡಲು
ನಿನ್ನ ಸೊಡರು ಸುಡುವ ಸರಳು
ಅಲ್ಲವೇ ದೀಪಾವಳಿ!

ಪ್ರೀತಿಯು ಸಂಗಮದ ಸೊಗಸು
ನಿನ್ನೆದೆಯಲಿ ಬೆಳೆದ ಕನಸು
ಜಗದೆದೆಯಲಿ ಬಿತ್ತಿ ಬೆಳೆಸು

ಆದನೆ ಸುಚಿರ ನವ್ಯವೆನಿಸು
ಬೆಳಗು ಬಾ ದೀಪಾವಳಿ !

ಮಡದಿಯರ ಕೂರ್ಮೆಯಾಗಿ
ಸೋದರಿಯರ ಸ್ನೇಹವಾಗಿ
ಎದೆಯೆದೆಯಲಿ ಒಲವ ಬೆಳಗಿ
ಜಗದ ಶಾಂತಿ ಕಾಂತಿಯಾಗಿ
ಬೆಳಗು ಬಾ ದೀಪಾವಳಿ !

ನಸುಕಿನ ನನೆ ಕೊನರುವೊಲು
ಮನಸಿನ ಆರೆ ಕಳೆಯುವೊಲು
ಒಳಗರುಳಲಿ ಬೆಳಕಿನರಳು
ಕೊನರುವಂತೆ ತಿಳಿವ ತಿರುಳು
ಬೆಳಗು ಬಾ ದೀಪಾವಳಿ !

ಕೂಡಿಯೆ ಜನ ಬಾಳುವೊಲು
ಹಿರಿಯರಾಗಿ ಬೆಳೆಯುವೊಲು
ದೇವರಾಗಿ ತೊಳಗುವೊಲು
ಶಾಂತಿಯನ್ನೆ ಜಪಿಸುವೊಲು
ಬೆಳಗು ಒಳಗು ಹೊರಗು !

---

# ರಾತ್ರಿಗೆ !

ನಿನ್ನ ನಾನು ಪ್ರೀತಿಸುವೆನು
ಶ್ಯಾಮ ಮಧುರ ಯಾಮಿನಿ
ನಿನಗಾಗಿಯೆ ಹಾತೊರೆವೆನು
ಸ್ವಪ್ನ ಲೋಕ ಸ್ವಾಮಿನಿ.

ನೀ ಬಂದರೆ ಇಳೆಗಿಳಿವುದು
ಅತುಲ ದಿವ್ಯ ಶಾಂತಿಯು
ನಿನ್ನಿರುಳಲಿ ಕರುಳಿಗೆಲ್ಲಿ
ಸಂಸಾರದ ಭ್ರಾಂತಿಯು

ಉಕ್ಕಿಸುತ್ತ ಕಾಳ್ಗಡಲನು
ಬ್ರಹ್ಮಾಂಡವ ಮುತ್ತಿದೆ
ಬಾನ್ಬಯಲಲಿ ಹಣ್ಣಿಸಿರುವ
ರವಿ ತೇಜವ ಮುಕ್ಕಿದೆ.

ಅಂಧಂತಮವೆಂದು ನಿನ್ನ
ಕರೆದರೇನು ರಜನಿಯೆ
ನಿನ್ನೊಡಲಿದೆ ದೀಪ್ತಿಮಂತ-
ತಾರಾಗೃಹ ರಾಶಿಯೆ.

ಪ್ರತಿ ಜೀವದ ಪ್ರತ್ಯಾಸೆಯು
ನಿನ್ನೆಡೆಯಲಿ ಬೆಳೆಯಿತು
ಈ ಲೋಕವು ಸ್ವರ್ಲೋಕದ
ಸುಖ ಸ್ವಪ್ನವ ಸವಿಯಿತು.

ಅಜ್ಞಾನದ ಕದಡೆಲ್ಲವು
ನೀ ಕರುಣಿಸೆ ತಿಳಿಯಿತು
ನಿನ್ನಡಿಯಲಿ ಋಷಿವರರಿಗೆ
ಸದ್ದರ್ಶನ ದೊರೆಯಿತು.

ಆರ್ತರ ಮೊರೆ, ದೀನರ ದಯೆ,
ಸೋತವರಿಗೆ ಆಸರೆ
ಮಾದೇವನು ಮರೆತವರಿಗು
ನೀ ಮಮತೆಯ ಹೆದ್ದೊರೆ.

ಮಾದಾಯಿಯೆ ನಿನ್ನೊಲವಿನ
ಹಾಲ್ಬಲವನು ಪಡೆಯಲು.
ವಿಸ್ತಾರಿತ ಹೃತ್ಕುಮುದದ
ಹೂಸೊದೆಯನು ಸವಿಯಲು

ಈ ಮೌನದ ಹಿಮಶೃಂಗಕೆ
ಈ ಶಾಂತಿಯ ಗಂಗೆಗೆ
ಓಡೋಡುತ ನಾ ಬಂದೆನು
ತೃಷಿತಾತ್ಮದ ತುಷ್ಟಿಗೆ.

ನೀ ಬೀಸಿದ ನಿದ್ದೆಯ ಬಲೆ
ಸವಿಕನಸಿನ ಸಂಕಲೆ
ಹರಿದೊಗೆದೆನು ಜಾಗರಿಸುತ-
ಲೀನನಾದೆ ನಿನ್ನೊಳೆ.

ಇಲ್ಲಿ ನಾನು ಕಾಣಲಿಲ್ಲ
ನಿಜ ಮರೆಸುವ ಕಲೆಯನು
ಸುಳ್ಳು ಸುಖದ ಸವಿ ಮಬ್ಬಿನ
ಸೆರೆಹಿಡಿಯುವ ಬಲೆಯನು

ನಿಂತೆ ನಿನ್ನ ಈ ವಿಶಾಲ-
ಅಂತರಂಗ ಸಂಮುಖ
ಕಂಡೆ ನಾನು ಈ ಭುವನದ
ಭವ್ಯವಾದ ಶ್ರೀಮುಖ.

ಹೃದಯದಲ್ಲಿ ಹುದುಗಿರಿಸಿದ
ಭಾವಲತೆಯು ನೆಗೆದಿತು
ಹೂವಿಸುತ್ತ ತೇಲಿಸಿತೊ
ಗಂಧ ಕವನ ಮೆಲ್ಲಿತು.

ಜಗದ ಗಾಯದಿಂದ ಬಸಿವ
ಕರುಣಾಜಲ ಹೊಮ್ಮಿತು
ಎಂಟು ದಿಕ್ಕಿನಿಂದ ಹರಿವ
ಗಾಳಿಯಲ್ಲಿ ತುಂಬಿತು.

ಪತಿತ ಶಪ್ತ ಪಾಪಾತ್ಮರ
ನಿಟ್ಟುಸಿರೂ ನೊರೆಯಿತು
ನಿನ್ನೆದೆ ಬಾಗಿಲವ ತಟ್ಟಿ
ಆಸರೆಯನು ಕೇಳಿತು.

ಮುರಿದೊಲವಿನ ಕನಿಕರವೂ
ನಿನ್ನ ಮುಖದಿ ಮೂಡಿತು
ನೊಂದವರಾ ಕಣ್ಣೀರೂ
ನಿನ್ನೆವೆಯಿಂದಿಳಿಯಿತು.

ಕರುಣೆಯಲ್ಲಿ ಕಂಡರಿಸಿದ
ಶ್ಯಾಮನ ಮಧುಮೂರ್ತಿಯು
ನಿನ್ನೆದೆಯಲಿ ಮಿಂಚಿತದೊ
ಅತಿ ಬಂಧುರ ಜ್ಯೋತಿಯು.

ಸುಳಿಗಾಳಿಯು ಕೊರಳಿನಲ್ಲಿ
ಮುರಲಿ ಗೀತ ಹೊಮ್ಮಿತು
ಜಗದಾತ್ಮದ ಮೂಕ ಮೌನ
ಪ್ರಾರ್ಥನೆಯಲ್ಲರಳಿತು

ಬಾನ್ನೆಲದಲಿ ಸೂಸಿತೊಂದು
ಭಾವಲಹರಿಯದ್ಭುತ
ಪಂಚಕರಣ ಹರಣಗಳನು
ಕಣ ಕಣದಲಿ ಮೀಟುತ

ನವಲೋಕದ ನವತೇಜದ
ಬೀಜಾಂಕುರವಾಯಿತು
ಆ ವಿಭವದ ಉನ್ಮಾದವು
ಎಲ್ಲೆಲ್ಲೂ ತೋರಿತು.

ನನ್ನೆದೆಯನು ಮುಟ್ಟಿ ತಾಯೆ,
ಆ ಆಸೆಯ ಚಿಗುರಿಸು
ಹಗೆ ಕೊಳೆಗಳ ತೊಳೆದು ತಾಯೆ
ಹೊಸ ಕೆಳೆಗಳ ಬೆಳೆಯಿಸು !

---

# ಸ್ವಪ್ನಹರಿಣ !

ಸ್ವಪ್ನಹರಿಣ ಚಪಲ ಚರಣ
ಕಂಗಳಲ್ಲಿ ಇಳಿಯೆ ಹರಣ
ಓಡುತಿಹುದು ವಿಧಿಗೆ ಭೀತ
ಎದೆಯ ಕಾಡೊಳು !

ಜೀವನ ನಿರ್ದಯ ನಿಷಾದ
ದುರ್ದೈವದ ಧನು ಸಜ್ಜಿತ
ಚಿಂತೆಯ ಸಂಜಲಗ ತಿವಿದು
ಬೆನ್ನ ಹತ್ತಿದ !

ಭೀತಿಯಿಂದ ತನುಕಂಪಿತ
ನಯನಂಗಳು ಅಶ್ರುಭರಿತ
ಬಂದಿತೆಂದಿತದೊ ಸಮೀಪ
ಕೊನೆಯುಗಳಿಗೆಯು

ಕರುಣಾಶ್ರಯವಿಲ್ಲದಾಯ್ತು
ನಿಷ್ಕರುಣೆಯ ಜಗವಾಯಿತು
ಕೆನ್ನೀರಿನ ಮಡುವಾಯಿತು
ಮೃದುಲ ದೇಹವು !

ಕಂಗಳ ಬಟ್ಟಲುಗಳಲ್ಲಿ
ಜಗದಾಸೆಯು ಮದಿರೆಯಲ್ಲಿ
ತುಂಬಿದರೂ ತುಳುಕಿ ತಿಂದು
ದುಃಖಸಾಗರ !

ಪ್ರಕೃತಿಯೆಲ್ಲ ಪ್ರತಿಬಿಂಬಿತ
ನಯನಂಗಳಲತಿ ರಂಜಿತ
ಅದನೊರಸುತ ತೇಲಿ ಬಂತು
ದುಗುಡ ಬೆಂತರ !

ಓಡಿದತ್ತ ಬೆಂಬತ್ತಿದೆ
ನೋಡಿದತ್ತ ನೆಗೆದೆದ್ದಿದೆ
ಮೂರ್ತಿಮಂತ ಮರಣದಂತೆ
ಬಾಳ ರಕ್ಕಸ !

ಸ್ವಪ್ನ ಹರಿಣ, ನಿಲ್ಲರೆ ಚಣ,
ದಿನ ಸತ್ತಿತು ಇದೆ ಈ ಕ್ಷಣ
ಬಿಸಿಲು ಬಾಣ ತಾಗೆ, ಬಾನ್ಗೆ-
ರಕ್ತ ಚಿಮ್ಮಿತು !

ಕಲ್ಪನೆಯುತ್ತುಂಗ ಶಿಖರ
ಮನದಾಸೆಯು ಸೌಖ್ಯ ಶಿಬಿರ
ಕೈಯ ಚಾಚಿ ಕರೆಯುತಿಹುದು
ತನ್ನ ಎಡೆಯಲಿ !

ಇರುಳಿನ ತೋಳ್ ತೊಟ್ಟಿಲಲ್ಲಿ
ಬೆಳುಂದಿಗಳ ಸೆರಗಿನಲ್ಲಿ
ವಿರಮಿಸಿ ಆ ಕರುಣೆಯಲ್ಲಿ
ಬೆಳೆಸು ಬಲವನು.

ನೀನಿರುತಿರೆ ಇದೆ ಸಂಸ್ಕೃತಿ
ನೀ ಬೆಳೆದರೆ ಅವ ಸಾಹಿತಿ
ಮನ ಮಂದಿರದಲಿ ಮೂರುತಿ
ಚೆಲುವು ನಿನ್ನದು !

ಮುನ್ನಡೆಯಲಿ ನೀ ಪ್ರೇರಣೆ
ಪ್ರತಿ ಯತ್ನಕೆ ನೀ ಚೇತನೆ
ನಿತ್ಯ ನೂತ್ನ ರಮ್ಯವದನೆ
ಕಹಿಯ ಕಳೆಯುವೆ !

ಸಾಯಬಾರದೆಂದು ನೀನು
ಕರಿಯಿರುಳಲಿ ಬೆಳಕು ನೀನು
ಬೆಂದ ಬಾಳ ಹಾಳಿನಲ್ಲಿ
ತಣಿವಿನೂಟೆಯು !

ನಿನ್ನುಳಿಸಲು ಜನ ಕೂಡಿದೆ
ದೇವರನ್ನು ಜಗ ಬೇಡಿದೆ
ಚಿಂತಾಕುಲ ಜೀವಿತದಲಿ
ನಿನಗೆ ಕಾದಿದೆ !

ಕ್ಷುಬ್ಧವಿದ್ಧ ಮಾನವ ಕುಲ
ಅದರ ದುಃಖವಾಯಿತಚಲ
ಅದರ ಯತ್ನವೆಲ್ಲ ವಿಫಲ
ವಿರಸ ಬಾಳುವೆ !

ಪಾಪದ ಕೋಳ್ ಗೋಣ್ ಬಿಗಿಯಲು
ಶಾಪದ ಕೈ ಅಲುಗಿರಿಯಲು
ನಿನ್ನೊಡಲಿನ ಕಸ್ತೂರಿಯು
ಪ್ರಾಣದಾನ ಮಾಡಲಿ !

ನಮ್ಮೊಡಲಿನ ಚಿಂತೆಯನ್ನು
ನೀಗದಿರುವ ಶಂಕೆಯನ್ನು
ಸ್ವಪ್ನ ಸಜಲ ನಯನ ನೀರ
ತಣಿವ ತೋರಲಿ !

ಚೆಲುವದೋರು ಒಲವನೀಡು
ಕೆಡುಕಳಿಯುವ ಹಾಗೆ ಮಾಡು
ಚಿರಮಂಗಲ ಸುರಸುಂದರ
ಬಾಳ ಕೊನರಿಸು.

———

# ವಸುಂಧರಾ ಗೀತ

ಪ್ರೀತಿ ಮತ್ತ ಸಾಗರಾ
ಬಾರೊ ಭವ್ಯ ಸುಂದರಾ
ಕರೆವೆ ನಾ ವಸುಂಧರಾ !

ನಿನ್ನಡಿಗಳಲಿಂದು ನಾನು ಹುಡಿಯೆನಿಸುತ ಕೆಡೆದಿಹೆ
ಬಾಳೆಲ್ಲವು ಕಲ್ಲಾಯಿತು, ಉದ್ಧಾರಕೆ ತಪವಿಹೆ
ಉಕ್ಕಿ ಬಾರೊ ಎಲ್ಲೆಡೆಯಲಿ
ಸೊಕ್ಕಿ ಬಾರೊ ನನ್ನೆಡೆಯಲಿ,
ಉಳಿಯಿತೊಂದೆ ಮನ್ಮಾನಸ ಕುವಲಯದಲಿ ಆಸೆಯು
ನೀನೊರ್ವನೆ ಮನದನ್ನನೆ ಇಂಗಿಸುವ ಪಿಪಾಸೆಯು
ಪ್ರೀತಿ ಮತ್ತ ಸಾಗರಾ,
ಬಾರೊ ಭವ್ಯ ಸುಂದರಾ,
ಕರೆವೆನಾ ವಸುಂಧರಾ !

ನನ್ನೆದೆಯಲಿ ಮಾಗಿದಂಥ ಹಾಲೊಲವಿನ ಸೆಲೆಗಳು
ತಾರುಣ್ಯದ ಕಾಮೋದ್ಭವ ಆಮೋದದ ತೊರೆಗಳು
ಕಲ್ಲೊಡೆಯುತ ಸಿಡಿದೆದ್ದವು,
ಗಿರಿಯಿಳಿಯುತ ಅಲೆಯಲೆದವು
ಹಾಡೊರೆಯುತ ತೆರೆತೆರೆಯಲಿ ನಿನ್ನನ್ನೇ ಕರೆದವು
ಎಲ್ಲೆಲ್ಲೊ ಸುತ್ತಿರಿದರು, ನಿನ್ನಲ್ಲೇ ಬೆರೆದವು !

ಪ್ರೀತಿಮತ್ತ ಸಾಗರಾ
ಬಾರೊ ಭವ್ಯ ಸುಂದರಾ
ಕರೆವೆ ನಾವಸುಂಧರಾ!

ಏಕೊ ಏನೊ ಮರೆತಿದ್ದೆನು ನಿನ್ನ ನಾನು ಬಹುದಿನ
ನೀನು ಮಾತ್ರ ಯಾಚಿಸಿರುವೆ ನನ್ನೊಲುಮೆಯನನುದಿನ
ಬೆಳ್ನೊರೆಯಲಿ ಕುಸುಮ ವ್ರಾತ,
ತೆರೆತೆರೆಯಲಿ ಭೃಂಗ ಗೀತ,
ಮೆರೆಯೆ, ನೀನು ಮೇಘನೀಲ, ಕಾಡಿ ಬೇಡಿ ಹಾಡಿಹೆ
ಮಾರುಲಿಯದ ನನ್ನ ನೋಡಿ ಬೇಗುದಿಯುನು- ತಳೆದಿಹೆ!
ಪ್ರೀತಿ ಮತ್ತ ಸಾಗರಾ,
ಬಾರೊ ಭವ್ಯ ಸುಂದರಾ,
ಕರೆವೆ ನಾ ವಸುಂಧರಾ!

ಮರ್ತ್ಯಲೋಕದಲ್ಲಿ ಜನಿಸಿದವಳು ನಾನು ಮುಗ್ಧಳು
ದಿವ್ಯಲೋಕ ಸ್ವಪ್ನ ಸುಖಕೆ ಸೋತವೆನ್ನ ಕಂಗಳು
ರವಿಯ ತೇಜ ಕಂಡ ಮರುಳು,
ಶಶಿಯ ಶಾಂತಿಯುಂಡ ಕರುಳು
ಹಗಲೆನ್ನದೆ ಇರುಳೆನ್ನದೆ ಮನೆ ಬಯಲುಗಳೆನ್ನದೆ
ಮುಗಿಯದಿರುವ ಮುಗಿಲ ದಾರಿಯಲ್ಲಿ ನಾನು ಸುತ್ತಿದೆ.
ಪ್ರೀತಿ ಮತ್ತ ಸಾಗರಾ,
ಬಾರೊ ಭವ್ಯ ಸುಂದರಾ,
ಕರೆವೆ ನಾ ವಸುಂಧರಾ!

ಮುಗಿಲ ಮೊಲ್ಲೆಯಘ್ರಾಣಕೆ ತಲೆಯನ್ನದು ತಿರುಗಿದೆ
ಸ್ವಪ್ನ ಸೇವಿಯಂಥ ಜೀವಿಯಂತೆ ನಾನು ಮರುಗಿದೆ
ಹುಸಿಗನಸಿನ ಆವ್ಹಾನಕೆ,
ಕಲ್ಪನೆಗಳ ಆವಾಸಕೆ,
ಬಿಸಿಲುಗುದುರೆಯೇರಿ ಹೊರಟೆ, ಬಯಕೆಯೂರಿಗೆ ಬೆಂದೆನು
ಬಂಜೆ ವಟವ ಸುತ್ತುವಂತೆ ಬಯಲಸುತ್ತಿ ನೊಂದೆನು.
ಪ್ರೀತಿ ಮತ್ತ ಸಾಗರಾ
ಬಾರೊ ಭವ್ಯ ಸುಂದರಾ
ಕರೆವೆ ನಾ ವಸುಂಧರಾ!

ತಪೋ ಭೂಮಿ ಹರನಿಗಾನು, ಶ್ಯಾಮನ ವೃಂದಾವನ
ಅಮರಾಂಗನೆಯರಿಗೆ ನಾನು ರತಿ ವಿಲಾಸದುಪವನ
ನನ್ನ ಗಿರಿಯ ಗಹ್ವರದಲಿ,
ಹರಿದ ಹಳ್ಳ ಹೊಳೆಗಳಲ್ಲಿ.
ದೇವತೆಗಳ ಚಿರನಿವಾಸವೆಂದು ನಾನು ಸೊಕ್ಕಿದೆ
ಪ್ರೀತಿಯನ್ನು ಬೇಡಿದವಳು ಕೀರ್ತಿಯನ್ನು ಹೊಂದಿದೆ.
ಪ್ರೀತಿಮತ್ತ ಸಾಗರಾ,
ಬಾರೊ ಭವ್ಯ ಸುಂದರಾ,
ಕರೆವೆ ನಾ ವಸುಂಧರಾ.

ದೇವರಿಲ್ಲಿ ಇಳಿದು ಬಂದು ಭೂಪರಾಗಿ ಆಳ್ದರು
ಕೊರಳಿನಲ್ಲಿ ಕೌಸ್ತುಭವೆನೆ ನನ್ನ ತೊಟ್ಟು ಮೆರೆದರು
ಆದರಾರು ಪ್ರೀತಿಯನ್ನು,

ಇಲ್ಲ ಬರಿಯ ಕರುಣೆಯನ್ನು,
ತೋರಲಿಲ್ಲ, ಬೆಲೆವೆಣ್ಣಿದು ಬರಿ ಮಣ್ಣಿದು ಎಂದರು
ನನ್ನೆದೆಯಲಿ ಉರಿವ ಆಸೆಯನ್ನು ಕಾಣದಾದರು.
ಪ್ರೀತಿಮತ್ತ ಸಾಗರಾ,
ಬಾರೊ ಭವ್ಯ ಸುಂದರಾ,
ಕರೆವೆ ನಾ ವಸುಂಧರಾ

ಬೇಟಕಾಗಿ ದೇವತೆಗಳಿಗೆಸಿತುಕಾಲ ಬಾಳಿದೆ
ಬೇಟೆಯಾಗಿ ಮಾನವರಿಗೆ ನೋವ ನಾನು ತಾಳಿದೆ
ಭಾವಪೂರ್ಣ ಹೃದಯಸಿಂಧು,
ಬರಿ ಹುಡಿಯಾಗಿಹುದು ಇಂದು,
ಚಿಕ್ಕ ಚಿಗಿತ ನಾಡಿನಲ್ಲಿ ತಿರುಗುತಿಹೆನು ಹುಚ್ಚಿಯು
ಅತ್ತು ಕರೆವೆ ಕಾಡಿನಲ್ಲಿ ದೊರಕಲೆಂದು ಒಲುಮೆಯು
ಪ್ರೀತಿಮತ್ತ ಸಾಗರಾ,
ಬಾರೊ ಭವ್ಯ ಸುಂದರಾ,
ಕರೆವೆ ನಾ ವಸುಂಧರಾ

ಕೋಟ್ಯಂತರ ದೇವತೆಗಳು ನನ್ನ ಸುತ್ತು ನೆರೆದರು
ಕಾಂತೆಯಂತೆ ಅವರ ರಮಿಸೆ ಕಾಂತಾರದಿ ತೊರೆದರು.
ಕತೆಯಾಯಿತು ನನ್ನ ಬಾಳು
ಜೊತೆಯಾರೆನಗಿಹರು ಹೇಳು
ನಾಯಿಯಂತೆ ಹರಿದು ತಿನ್ನುವವರು ನನ್ನ ಕುವರರು
ನನ್ನ ವಿಭವ ಸಂಪನ್ನರು ಸ್ನೇಹಸೂನ್ಯ ದೃಪ್ತರು.

ಪ್ರೀತಿಮತ್ತ ಸಾಗರಾ,
ಬಾರೊ ಭವ್ಯ ಸುಂದರಾ,
ಕರೆವೆ ನಾ ವಸುಂಧರಾ,

ನೀನು ತೋಳ ತೆಕ್ಕೆಯಲ್ಲಿ ನನ್ನ ಹಿಡಿಯಬಯಸಿದೆ
ಮರಳು ದಂಡೆಯಿಂದು ಕೊರೆದು ಒಳಗೆ ನುಗ್ಗಲೆಳಸಿದೆ,
ಸ್ವಚ್ಛಂದ ಛಂದದಲ್ಲಿ,
ಹಾಡಿದಂಥ ಗೀತದಲ್ಲಿ,
ಪ್ರೀತಿರಸವ ಹೊಮ್ಮಿಸುತ್ತ ನನ್ನೆದೆಯನು ಸುತ್ತಿದೆ,
ನನಗರ್ಪಿಸಲೆಂದು ನೊರೆಯ ಹಾರವನ್ನು ಎತ್ತಿದೆ.
ಪ್ರೀತಿಮತ್ತ ಸಾಗರಾ,
ಬಾರೊ ಭವ್ಯ ಸುಂದರಾ,
ಕರೆವೆ ನಾ ವಸುಂಧರಾ.

ದೈವ ಹೀನೆ ನಾನು ನಿನ್ನ ಹೀಯಾಳಿಸಿ ಜರೆದೆನು
ಇಂದು ನಿನ್ನ ನೆನಹಿನಿಂದ ಪುಳಕಿತಾಂಗಳಾದೆನು,
ಅಂಗಾಂಗವನೇರಿ ಬಾರೊ,
ಕಣಕಣದಲಿ ಹರಿದು ಬಾರೊ,
ಬೆಂದೊಡಲನು ತಣಿಸಬಾರೊ ನೀಲಸುಭಗ ಸಾಗರಾ,
ಒಲವಿಗಾಗಿ ಬಾಯ್ಬಿಡುತಿಹೆ ಹಣಿಸು ಬಾ ನಿರಂತರಾ,
ಪ್ರೀತಿಮತ್ತ ಸಾಗರಾ,
ಬಾರೊ ಭವ್ಯ ಸುಂದರಾ,
ಕರೆವೆ ನಾ ವಸುಂಧರಾ,

ನನ್ನೆದೆಯನು ಸುತ್ತಿದಂಥ ಸ್ವಪ್ನ ಸುಮನ ಬಂಧನ
ಬಗೆಯೆಲ್ಲವ ಮರುಳುಗೊಳಿಪ ಹುಸಿಯಾಸೆಯ ನರ್ತನ
ಜರಿದೇಳುವ ಹಾಗೆ ಬಾರೊ,
ನಿಜವನ್ನೇ ಬಿತ್ತ ಬಾರೊ.
ಹುಡಿಹುಡಿಯಲಿ ಹರಣ ಕಿಡಿಯ ತೂರು ಪ್ರಾಣದಾಯಕ
ನಿನ್ನನ್ನೇ ನಂಬಿರುವೆನು ಎತ್ತು ಜೀವನಾಯಕ !

---

# ಸಾಹಿತ್ಯ ನಿಕೇತನ



ಸಾಹಿತ್ಯವು ಸಮಾಜದ ಅಂಗಳದಲ್ಲಿ ತುಲಸೀವೃಂದಾವನವಾಗಬೇಕು. ಅದರಿಂದ ಜೀವನವು ಸುಂದರವಾಗುವದಲ್ಲದೆ ಪವಿತ್ರವಾಗುತ್ತದೆ; ಪುರೋಗಾಮಿಯಾಗುತ್ತದೆ. ಅಂತೆಯೇ ಸಾಹಿತ್ಯದ ಸ್ಫೂರ್ತಿ ವಿಶೇಷಗಳನ್ನೆಲ್ಲ ಅಳವಡಿಸಿಕೊಂಡು ಸಮಾಜದ ಹೃದಯ ಮಧ್ಯದಲ್ಲಿ ಅದರ ಪ್ರತಿಷ್ಠಾಪನೆಯನ್ನು ಮಾಡಬೇಕು.

ಅಂತೆಯೇ ಸಾಹಿತ್ಯ ನಿರ್ಮಿತಿಯಷ್ಟೇ ಅದರ ಪ್ರಕಟಣೆ ಉನ್ನತ ಕಾರ್ಯವಾಗಿದೆ. ಅದು ಪೇಟೆಗಿಳಿದ ಬರಿಯ ಮಾರಾಟದ ವ್ಯಾಟವಲ್ಲ! ಅದೊಂದು ಸಮಾಜ ಸೇವೆ! ಆ ದೃಷ್ಟಿಯಿಂದ ಸಮಾಜದ ಜಾಗೃತಿ ಪ್ರಗತಿಗಳಿಗೆ ಅವಶ್ಯಕವಾದ ರಂಜಕ ಬೋಧಕ ಸಾಹಿತ್ಯದ ವಿವಿಧ ಪ್ರಕಾರಗಳನ್ನು ಕಾಲ ಕಾಲಕ್ಕೆ ಪ್ರಕಟಿಸಿ ಜನತೆಯಲ್ಲಿ ನವಾಭಿರುಚಿಯನ್ನು ನಿರ್ಮಿಸಬೇಕೆಂಬ ಹವ್ಯಾಸವಿದೆ ಸಾಹಿತ್ಯ ನಿಕೇತನಕ್ಕೆ. ನಿಕೇತನವು ಆ ಮಾರ್ಗದಲ್ಲಿ ಸೇವಾತತ್ಪರವಾಗಿ ದುಡಿಯಲು ದಣಿಯಲು ಸಿದ್ಧವಾಗಿದೆ. ಅದರ ಸಾಫಲ್ಯ ಮಾತ್ರ ಸಮಾಜದ ಸಹಕಾರ್ಯವನ್ನವಲಂಬಿಸಿದೆ.